# ಮುನ್ನುಡಿ

ನನ್ನ ತರುಣಮಿತ್ರರಾದ ಶ್ರೀ॥ ಮಧುಗಿರಿ ವಾಸುದೇವಮೂರ್ತಿಗಳವರು ತಮ್ಮ ಈ ಗುಲಿಸ್ತಾನ್ ಗ್ರಂಥದ ಭಾಷಾಂತರಕ್ಕೆ ನನ್ನಿಂದ ಒಂದು ಮುನ್ನುಡಿಯನ್ನು ಬಯಸಿದಾರೆ. ಹೋಮ ಮಾಡುವವರು ಮಾಡುತ್ತಿರಲಾಗಿ ಹೋಮಾಗ್ನಿಯ ಪಕ್ಕದಲ್ಲಿ ಕುಳಿತು ಯಾವುದೋ ಅಲ್ಪ ಸ್ವಲ್ಪ ಕೆಲಸಮಾಡಿ ಅಥವಾ ಯಾವ ಕೆಲಸವನ್ನೂ ಮಾಡದೆ ಇದ್ದು ಹೋಮ ಮುಗಿದ ಹೊತ್ತಿನಲ್ಲಿ ಎಲೆ ಅಡಿಕೆ ತೆಗೆದುಕೊಳ್ಳುವ ಒಂದು ಅಧಿಕಾರಸ್ಥಾನವಿದೆ. ಕನ್ನಡ ಗ್ರಂಥಗಳಿಗೆ ಮುನ್ನುಡಿ ಬರೆಯುವುದರಲ್ಲಿ ಇಂದು ನನ್ನ ಸ್ಥಾನ ಇದರಂತೆ ಆಗಿದೆ. ಕಷ್ಟವೇನನ್ನೂ ಕೊಡದೆ ಮರ್ಯಾದೆಯನ್ನು ಮಾತ್ರ ತೋರುವ ನನ್ನ ಮಿತ್ರರ ಈ ವ್ಯಾಪಾರಕ್ಕೆ ನಾನು ಮತ್ತೆ ಮತ್ತೆ ನಿಸ್ಸಂಕೋಚವಾಗಿ ಅಥವಾ ಬಹು ಸ್ವಲ್ಪ ಸಂಕೋಚದಿಂದ ಒಪ್ಪುತ್ತಿದೇನೆ. ಇದು ಅಂಥದೇ ಒಂದು ಸಂದರ್ಭವಾಗಿದೆ.

ನಮ್ಮ ಹೊಸ ಸಾಹಿತ್ಯ ಆರಂಭವಾದದ್ದು ಭಾಷಾಂತರಗಳಿಂದ. ಇಂಗ್ಲೀಷು, ಬಂಗಾಳಿ, ಮರಾಠಿ, ತೆಲುಗು ಭಾಷೆಗಳಿಂದ ಹತ್ತಾರು ಪುಸ್ತಕಗಳು ಪರಿವರ್ತಿತವಾಗಿ ಬಂದಮೇಲೆ ಕನ್ನಡ ಲೇಖಕರು ಸ್ವತಂತ್ರ ಕೃತಿಗಳನ್ನು ರಚಿಸಲಾರಂಭಿಸಿದರು. ಸ್ವತಂತ್ರ ರಚನೆಯಿಂದ ಒಂದು ಅರ್ಥಕ್ಕೆ ಭಾಷಾಂತರ ಕಾರ್ಯಕ್ಕೆ ತೊಂದರೆ ಆಯಿತು. ಆದರೂ ಸ್ವತಂತ್ರ ಕೃತಿ ಸೃಷ್ಟಿಯಾಗುವುದು ತೀರಾ ಆವಶ್ಯಕ ಎಂಬ ದೃಷ್ಟಿಯಿಂದ ಈ ಸ್ಥಿತಿಯನ್ನು ನಾವು ಸ್ವಾಗತಿಸಿದ್ದೇವೆ. ಒಂದು ಜನದ ಸ್ವಂತ ಅನುಭವಕ್ಕೆ ರೂಪು ಕೊಡಬಲ್ಲುದು ಸ್ವತಂತ್ರ ಸಾಹಿತ್ಯವೇ. ಆದ್ದರಿಂದ ನಮ್ಮಲ್ಲಿ ಸ್ವತಂತ್ರವೆಂಬ ರೀತಿಯ ಕೃತಿ ಬೆಳೆಯುವುದು ಸಂತೋಷದ ವಿಷಯ.

ಆದರೆ ಸಜೀವವಾಗಿರುವ, ಬೆಳೆಯುತ್ತಿರುವ, ಒಂದು ಸಾಹಿತ್ಯ ಇತರ ಸಾಹಿತ್ಯಗಳ ಮೈತ್ರಿಯನ್ನು ಬಹುಕಾಲ ತೊರೆಯಲಾಗದು. ಕನ್ನಡಕ್ಕೆ ಪ್ರಪಂಚದ ಎಲ್ಲಾ ಭಾಷೆಗಳ ಉದ್ಗ್ರಂಥಗಳೂ ಭಾಷಾಂತರವಾಗಬೇಕೆನ್ನುವುದೇ ನಮ್ಮ ಧ್ಯೇಯ. ಆದ್ದರಿಂದ ಪರಿವರ್ತಕರ

ಕಾರ್ಯವೂ ಸತತವಾಗಿ ನಡೆಯುತ್ತಿರಬೇಕು; ಇದಕ್ಕಾಗಿ ಇದರಲ್ಲಿ ಅಭಿರುಚಿ ಉಳ್ಳ ಹತ್ತಾರು ಲೇಖಕರಾದರೂ ದುಡಿಯುತ್ತಿರಬೇಕು. ಅಲ್ಲದೆ ಭಾಷಾಂತರಕಾರರು ಸಾಧ್ಯವಾದಷ್ಟುಮಟ್ಟಿಗೆ ತಾವು ಪರಿವರ್ತಿಸುವ ಗ್ರಂಥಗಳನ್ನು ಮೂಲಭಾಷೆಯಲ್ಲಿ ಪಾಠಮಾಡಿ ತಿಳಿದುಕೊಂಡವರಾಗಿರಬೇಕು. ಹೀಗಾಗುತ್ತಿದ್ದರೆ ಮಾತ್ರ ಕನ್ನಡಲೇಖನ ಪ್ರಪಂಚ ಸರಿಯಾದ ರೀತಿಯಲ್ಲಿ ಬೆಳೆಯುತ್ತಿದೆ ಎಂದು ನಾವು ಧೈರ್ಯದಿಂದಿರಬಹುದು.

ಈ ಗ್ರಂಥದ ಲೇಖಕರು ನಮಗೆ ಈ ಧೈರ್ಯವನ್ನು ಕೊಡುವಂತೆ ಕೆಲಸಮಾಡುತ್ತಿರುವ ಮಿತ್ರರಲ್ಲಿ ಒಬ್ಬರು. ನಮ್ಮಲ್ಲಿ ಈಗ ಸಂಸ್ಕೃತ, ಇಂಗ್ಲೀಷು, ಬಂಗಾಳಿ, ಮರಾಠಿ, ತೆಲುಗು, ತಮಿಳು, ಹಿಂದೀ ಭಾಷೆಗಳಿಂದ ಆಯಾ ಭಾಷೆಗಳಲ್ಲಿರುವ ಮೂಲ ಗ್ರಂಥಗಳನ್ನು ನೋಡಿಕೊಂಡು ಭಾಷಾಂತರ ಮಾಡಿಕೊಡಬಲ್ಲ ಲೇಖಕರು ಹಲವರಿದಾರೆ. ಗ್ರೀಕ್ ಭಾಷೆಯಿಂದ ಹೀಗೆ ಭಾಷಾಂತರ ಮಾಡಿರುವವರು ಒಬ್ಬರಿದಾರೆ. ಇತರ ಭಾಷೆಗಳ ಪರಿಚಯವನ್ನು ಸಂಪಾದಿಸಿ ಈ ಕೆಲಸವನ್ನು ಮಾಡಬಲ್ಲವರು ಮುಂದೆ ಬರಬೇಕಾಗಿದೆ. ಇಂಥ ಭಾಷೆಗಳಲ್ಲಿ ಮುಖ್ಯವಾದುವು ಉರ್ದು, ಮತ್ತು ಪರ್ಷಿಯನ್. ಶ್ರೀ॥ ವಾಸುದೇವಮೂರ್ತಿಗಳವರು ಈ ಭಾಷೆಗಳನ್ನು ಅಭ್ಯಾಸ ಮಾಡಿದಾರೆ. ಅವುಗಳ ಕೃತಿಗಳಿಂದ ನೇರವಾಗಿ ಪರಿವರ್ತಿಸಬಲ್ಲವರಾಗಿದಾರೆ. ಇದು ಕನ್ನಡಕ್ಕೆ ಹಿರಿಯ ಸೇವೆ. ಈ ಬಗ್ಯೆ ನಾವು ಈ ಲೇಖಕರನ್ನು ಅಭಿನಂದಿಸಬೇಕು.

ಇನ್ನು ಈಗ ಇವರು ತೆಗೆದುಕೊಂಡಿರುವ ಗ್ರಂಥದ ವಿಚಾರ ಹೆಚ್ಚು ಏನನ್ನೂ ಹೇಳಬೇಕಾದುದಿಲ್ಲ. ಮಹಾ ಕವಿ ಸಾದಿ ಲೋಕಪ್ರಸಿದ್ಧನಾದ ರಸಿಕ ತತ್ವಜ್ಞ. ಇವನ ರಸ್ಯಜೀವನ, ಸೂಕ್ಷ್ಮದೃಷ್ಟಿ, ಉಕ್ತಿಚಾತುರಿ ಇವನ ಗುಲಿಸ್ತಾನ್ ಕೃತಿಗೆ ಲೋಕದ ಸಾಹಿತ್ಯದಲ್ಲಿ ಒಂದು ಉನ್ನತ ಸ್ಥಾನವನ್ನು ಗಳಿಸಿವೆ. ಇದುವರೆಗೆ ನಮ್ಮಲ್ಲಿ ಈ ಕೃತಿಯ ಪರಿಚಯುವನ್ನು ಬಯಸಿದವರು ಯಾವುದಾದರೊಂದು ಇಂಗ್ಲಿಷ್ ಪರಿವರ್ತನವನ್ನು ನೋಡಬೇಕಾಗಿತ್ತು. ಈಗ ಶ್ರೀ॥ ವಾಸುದೇವಮೂರ್ತಿಗಳ ಉದ್ಯಮದಿಂದ ಅದನ್ನು ಕನ್ನಡದಲ್ಲೇ ಪಡೆಯಬಹುದಾಗಿದೆ. ಈ ಸೇವೆಯ ಬಹುಮುಖವಾದ ಗುಣಗಳಲ್ಲಿ ಎರಡು ಮುಖ ಪ್ರಧಾನವಾದವು: ಬಹು

ಹೆಚ್ಚು ಸಂಖ್ಯೆಯ ಕನ್ನಡಿಗರು ನಾದಿಯ ಹೂದೋಟವನ್ನು ಹೊಗ ಬಹುದು; ಅದರ ಸೌಂದರ್ಯ ಸೌರಭವನ್ನು ಹೆಚ್ಚು ನಿಕಟವಾಗಿ ಅನುಭವಿಸಬಹುದು.

ಲೇಖಕರ ಹಿರಿಯ ಕನ್ನಡ ಸೇವೆ ಕನ್ನಡಿಗರಿಗೆ ಹಿರಿಯ ಉಪಕಾರ ವಾಗಿದೆ. ಈ ಬಗ್ಗೆ ನಾನು ಶ್ರೀ॥ ವಾಸುದೇವಮೂರ್ತಿಗಳನ್ನು ಹೃತ್ಪೂರ್ವಕ ವಂದಿಸುತ್ತೇನೆ.

ನಾದಿಯ ಹೂದೋಟದ ಕಂಪು ಕನ್ನಡ ನುಡಿಯಲ್ಲಿ ಹರಡಲಿ.

ಬೆಂಗಳೂರು,<br>
ಪಾರ್ಥಿವ ಸಂವತ್ಸರ ಜ್ಯೇಷ್ಠ ಬಹುಳ ಪಂಚಮಿ,<br>
೩೦-೬-೧೯೪೫.

ಶ್ರೀನಿವಾಸ

# ವಿಷಯಸೂಚಿಕೆ

# ಗುಲಿಸ್ತಾನ್ ಕತೆಗಳು

## ಕವಿ: ಕಾವ್ಯ

### ೧

ಗುಲಿಸ್ತಾನ್ ಪರ್ಷಿಯನ್ ಸಾಹಿತ್ಯದಲ್ಲಿ ಪ್ರಸಿದ್ಧವಾದ ಗ್ರಂಥ. ಇದನ್ನು ಬರೆದ ಕವಿ ಷೇಕ್ ಮಸ್ಲಹುದ್ದೀನ್ ಸಾದಿ. ಇವನ ಕಾಲ ಕ್ರಿಸ್ತಶಕ ಸುಮಾರು ೧೧೮೪ರಿಂದ ೧೨೯೨ರ ವರೆಗೆ. ಅಷ್ಟು ವರ್ಷ ಬದುಕಿ ಬಾಳಿದ ಎಂದು ಹೇಳುತ್ತಾರೆ. ಇವನು ಹುಟ್ಟಿದ ಊರು ದಕ್ಷಿಣ ಪರ್ಷಿಯಾದ ಮುಖ್ಯಸ್ಥಳವಾಗಿದ್ದ ಷೀರಾಸ್. ಪ್ರಸಿದ್ಧರಾದ ಕವಿಗಳ ಜನ್ಮಸ್ಥಳವೆಂದು ಈ ಪಟ್ಟಣಕ್ಕೆ ಪರ್ಷಿಯನ್ ಸಾಹಿತ್ಯದಲ್ಲಿ ಒಂದು ಪ್ರಾಶಸ್ತ್ಯವಿದೆ. ಹಾಫಿಸ್ ಕವಿಯೂ ಈ ಊರಿನವನೆ.

ಸಾದಿಯ ತಂದೆಗೆ ಷೀರಾಸ್ಸಿನ ದೊರೆಗಳ ಬಳಿಯಲ್ಲಿ ಕೆಲಸವಿತ್ತು. ಸಾದಿ ಇನ್ನೂ ಚಿಕ್ಕವನಾಗಿರುವಾಗಲೇ ತಂದೆ ತೀರಿಕೊಳ್ಳಲು ದೊರೆಯಾದ ಸಾದ್-ಬಿನ್-ಜ್ಹಂಗಿ ಇವನನ್ನು ಕೈಹಿಡಿದು ಮುಂದಕ್ಕೆ ತಂದನೆಂದು ಗೊತ್ತಾಗುತ್ತದೆ. ದೊರೆಯ ನೆನಪಿಗಾಗಿಯೇ, ಕವಿ ಸಾದಿ ಎಂಬ ಹೆಸರನ್ನು ಇಟ್ಟುಕೊಂಡುದು; ಮೊದಲು ಇವನಿಗೆ ಮಸ್ಲಹುದ್ದೀನ್ ಎಂದು ನಾಮಕರಣವಾಗಿತ್ತು.

ಸಾದಿಯ ಹೆಚ್ಚಿನ ವಿದ್ಯಾಭ್ಯಾಸವೆಲ್ಲ ಬಗ್ದಾದಿನ ನಿಜಾಮಿಯಾ ವಿಶ್ವವಿದ್ಯಾಸಿಲಯದಲ್ಲಿ ನಡೆಯಿತು. ಅವನು ವಿದ್ಯಾಲಯದ ಆವರಣದ ಹೊರಗಿದ್ದ ಹಿರಿಯ ಸಾಹಿತಿಗಳನ್ನೂ ಅನುಸರಿಸಿ ಅನೇಕ ವಿಷಯಗಳನ್ನು ಸಂಗ್ರಹಿಸಿ, ಅರಬ್ಬಿ ಪಾರಸಿ ಭಾಷೆಗಳಲ್ಲಿ ವಿಶೇಷ ಪಾಂಡಿತ್ಯ ಸಂಪಾದಿಸಿ ಪಾರಸಿ ಸಂಸ್ಕೃತಿಯ ವೈಶಿಷ್ಟ್ಯವಾದ ಸೂಫಿ ಮತವನ್ನು ಚೆನ್ನಾಗಿ ಮನನ ಮಾಡಿಕೊಂಡು ವಿದ್ಯಾಭ್ಯಾಸದ ಕಾಲದಲ್ಲಿಯೇ ಪರ್ಷಿಯದ ಪಶ್ಚಿಮದ ಗಡಿಯಿಂದ ಪೂರ್ವದ ಗಡಿಯ ವರೆಗೆ ಆಗಾಗ ಸಂಚಾರಮಾಡಿ ಒಳ್ಳೆಯ ಬರಹಗಾರನೆಂದೂ ವಾಗ್ಮಿಯೆಂದೂ ಹೆಸರು ಗಳಿಸಿದನು.

ಸಾದಿಯ ವಿದ್ಯಾಭ್ಯಾಸದ ಕಾಲ ಮುಗಿಯುವ ವೇಳೆಗೂ, ಪರ್ಷಿಯದ ಮೇಲೆ ಟಾರ್ಟರರ ದಾಳಿಗಳು ಪ್ರಾರಂಭವಾಗುವ ವೇಳೆಗೂ ಸರಿಯಾಯಿತು. ಈ ಗೊಂದಲವನ್ನು ನೋಡಿ ಅವನು ಬೇರೆಬೇರೆ ದೇಶಗಳಲ್ಲಿ ತಿರುಗಿಕೊಂಡಿರುವುದೇ ಮೇಲೆಂದು ಹೊರಟುಬಿಟ್ಟನು. ಹಿಂದೂಸ್ತಾನದಲ್ಲಿ ಗುಜರಾತ್ ದೆಹಲಿಗಳವರೆಗೂ ಬಂದಿದ್ದು ಪಶ್ಚಿಮದಲ್ಲಿ ಈಜಿಪ್ಟ್ ಅಬಿಸೀನಿಯಾಗಳವರೆಗೂ ಸಂಚಾರಮಾಡಿ ಅಲ್ಲಿ ಸ್ವಲ್ಪ ಕಾಲ ಇಲ್ಲಿ ಸ್ವಲ್ಪಕಾಲ ಇದ್ದು ಷೀರಾಸ್ಗೆ ಬಂದು ನೆಲಸುವವೇಳೆಗೆ ಇವನಿಗೆ ೭೦ ವರುಷ ವಯಸ್ಸಾಗಿತ್ತು. ಆಗ ಸಾದ್-ಬಿನ್-ಝಂಗಿಯ ಮೊಮ್ಮಗನಾದ ಅಬೂಬಕರ್-ಬಿನ್-ಸಾದ್ ಅಲ್ಲಿ ಆಳುತ್ತಿದ್ದನು. ಸಾದಿ ತನ್ನ ಗುಲಿಸ್ತಾನ್ (ಹೂಗಳ ತೋಟ) ಮತ್ತು ಬೋಸ್ತಾನ್ (ಪರಿಮಳದ ಉದ್ಯಾನ) ಗ್ರಂಥಗಳನ್ನು ಬರೆದುದು ಆಗಲೇ.

ಪರ್ಷಿಯದ ನಾನಾ ಭಾಗಗಳಲ್ಲಿ ಎಷ್ಟು ರಾಜಕೀಯ ಬದಲಾವಣೆಗಳಾದಾಗ್ಯೂ ಮಂತ್ರಿಗಳೂ ಶ್ರೀಮಂತ ಅಧಿಕಾರಿಗಳೂ ಸಾದಿಯನ್ನು ಪೂಜ್ಯಭಾವದಿಂದ ಕಂಡುಕೊಂಡಿದ್ದರೆನ್ನುವುದರಲ್ಲಿ ಸಂದೇಹ ಕಾಣುವುದಿಲ್ಲ. ತಬ್ರೀಸ್ಜ್ ನಗರದಲ್ಲಿ ರಾಜಧಾನಿಯನ್ನು ಮಾಡಿಕೊಂಡ ಟಾರ್ಟರ್ ದೊರೆಗಳ ಬಳಿ ಮುಖ್ಯ ಅಧಿಕಾರಗಳಲ್ಲಿದ್ದ ಜೂ-ಆನಿ ಸಹೋದರರು ಸಾದಿಗೆ ಬಹಳ ಸಹಾಯಮಾಡಿದರು. ಟಾರ್ಟರರ ಕಾಲದಲ್ಲಿ ಪರ್ಷಿಯಾಕ್ಕೆ ಎಷ್ಟೋ ಹಾನಿ ತಟ್ಟಿತಾದರೂ ಪರ್ಷಿಯನ್ ಸಾಹಿತ್ಯ ಅಳಿಯಲಿಲ್ಲವೆನ್ನುವುದಕ್ಕೆ ಆಗಿನ ಕಾಲದಲ್ಲಿ ಸಾದಿ ಮೊದಲಾದ ಕೆಲವು ದೊಡ್ಡ ಕವಿಗಳು ಇದ್ದುದೇ ನಿದರ್ಶನವೆಂದು ವಿಮರ್ಶಕರು ಹೇಳುತ್ತಾರೆ.

ಸಾದಿಯ ಬರಹಗಳು ಸುಮಾರು ೨೦–೨೨ ಹೊತ್ತಗೆಗಳಷ್ಟಾಗುತ್ತವೆ. ಗುಲಿಸ್ತಾನ್ ಬೋಸ್ತಾನ್ ಮುಂತಾದ ಮೂರು ನಾಲ್ಕು, ಸುಲಭವಾಗಿ ಎಲ್ಲ ಜನರೂ ಮೆಚ್ಚುವ ಗ್ರಂಥಗಳಾಗಿವೆ; ಮಿಕ್ಕವು ಸ್ವಲ್ಪ ಪಂಡಿತ ಗ್ರಾಹ್ಯವಾಗಿವೆ. ಹಾಸ್ಯ ರೀತಿಯಿಂದ ಗುರಿಯಿಟ್ಟು ಹೇಳುವ ಶಕ್ತಿ ಸಾದಿಯ ಮಾತುಗಳಲ್ಲಿದೆಯೆಂದು ವಿಮರ್ಶಕರು ಒಪ್ಪುತ್ತಾರೆ. ಸಾದಿಯ ಸ್ವದೇಶ ಬಂಧುಗಳು ಇವನಿಗೆ ಷೇಕ್ ಸಾದಿ ಎಂಬ ಮರ್ಯಾದೆಯ ಹೆಸರನ್ನು ಸಲ್ಲಿಸಿದ್ದಾರೆ. ಹಣತೆ ಹೊತ್ತಿಸುವ ಪ್ರತಿ

ಯೊಂದು ಮನೆಯಲ್ಲೂ ಸಾದಿಯ ಮಾತುಕತೆಗಳ ಒಂದು ಸಂಗ್ರಹ ವಿರಬೇಕಂತೆ.

೨

ಸಾದಿ ತನ್ನ ಗುಲಿಸ್ತಾನ್ ಗ್ರಂಥಕ್ಕೆ ತಾನೇ ಒಂದು ಸ್ವಾರಸ್ಯವಾದ ಪೀಠಿಕೆ ಬರೆದಿದ್ದಾನೆ. ಆ ಪೀಠಿಕೆಯ ಕೆಲವು ಭಾಗಗಳು ಹೀಗೆ ಇವೆ:

**ದೇವನ ಕರುಣೆ:**

'ದೇವನು ಬೆಳಗಿನ ಸುಳಿಗಾಳಿ ಎಂಬ ತನ್ನ ಮಂತ್ರಿಗೆ ಹೇಳಿದ ಹಸುರು ಹುಲ್ಲಿನ ಹಾಸಿಗೆಯನ್ನು ಹರಡು ಎಂದು. ವಸಂತದ ಮುಂಗಾರ ಮುಗಿಲು ಎಂಬ ದಾದಿಗೆ ಅಪ್ಪಣೆ ಮಾಡಿದ, ಭೂಮಿಯೆಂಬ ತೊಟ್ಟಿಲಲ್ಲಿ ಎಳೆಸಸಿಗಳೆಂಬ ಮಕ್ಕಳನ್ನು ತೂಗಿ ಸಲಹು ಎಂದು. ಹೊಸವರುಷದ ಉಡುಗೊರೆ ಎಂದು ಗಿಡಗಳಿಗೆ ಹಸುರಾದ ಎಲೆಗಳನ್ನು ತೊಡಿಸಿದ. ಚಿಗುರುಗೊಂಬೆಗಳೆಂಬ ಮಕ್ಕಳಿಗೆ ನಗುವ ಹೂವುಗಳ ದಂಡೆಗಳಿಂದ ಅಲಂಕರಿಸಿದ. ಹುಲ್ಲಿನೊಳಗಿನ ರಸ ಅವನ ಶಕ್ತಿಯಿಂದ ಜೇನು ರಸದಂತೆ ಸವಿಯಾಯಿತು. ಅವನ ಪಾಲನೆಯಿಂದಲೆ ಹುಟ್ಟಿಹಾಕಿದ ಬೀಜ ಖರ್ಜೂರದ ಮರವಾಗಿ ಬೆಳೆಯಿತು.'

ಸಾದಿಗೆ ತನ್ನ ಊರಿನ ಮೇಲೆ ಬಹಳ ಮಮತೆ. 'ಉನ್ನತೋನ್ನತ ನಾದ ದೇವನು ಪರಮ ಪಾವನ ಭೂಮಿ ಷೀರಾಸ ರಾಜ್ಯವನ್ನು ಕಡೆಯ ಕಾಲದವರೆಗೆ ಸುಖದೊಳಿರಿಸಿರಲಿ!' ಎಂದು ಹೇಳುತ್ತಾನೆ.

ಮಾತನಾಡಬೇಕಾದ ಸಂದರ್ಭದ ವರ್ಣನೆ ಹೀಗೆ ಬರುತ್ತದೆ.

'ಬಾಯೊಳಗೆ ನಾಲಗೆಯು ಇಹುದೆಂದರೇನಯ್ಯ,
ಮತಿಯೆಂಬ ಭಂಡಾರಕದು ಬೀಗದಾ ಕೈಯಿ
ಮುಚ್ಚಳವು ಮುಚ್ಚಿರಲು ಹೇಳಲೀಗಹುದೆಂತು
ಒಡವೆ ಇಹುದೋ ಒಳಗೆ ಏನಿಹುದೊ ಮಾರಲ್ಕೆ?
ಬುದ್ಧಿವಂತರ ಮುಂದೆ ಮೌನ ಲೇಸಿರಬಹುದು,
ಅಭಿಮತವ ಕೊಡುವಂದು ಬಿಚ್ಚಿ ಆಡಲುಬೇಕು.
ತಿಳಿವಿಗಿದು ಕತ್ತಲೆಯು, ಮೌನದಾ ಕಾಲದಲಿ
ಮಾತು, ಮಾತಿನ ವೇಳೆ ಮೌನವನು ಧರಿಸಿಹುದು.'

**ಸಾದಿಯ ತೋಟ:**

'ಏನು ಸೊಬಗಿನ ಬೀಡು!
ಹೃದಯವನು ಅರಳಿಸುವ ವೃಕ್ಷಗಳು ಮೇಲೆಲ್ಲ ಹೆಣೆದು ಹಬ್ಬಿಹವು,
ನೆಲವೆಲ್ಲ ಸ್ಫಟಿಕಮಣಿಮಯವು.
ವನವೆಲ್ಲ ಜಿಗಿಜಿಗಿಸುವಾ ಹಣ್ಣುಗಳ ತೋರಣವು!
ಅಲ್ಲಿ ಕುಡಿಯಲಿ ನಿಂತು ನೋಡಲು ರಂಗುರಂಗಿನ ಪುಷ್ಪವು,
ಇಲ್ಲಿ ಗೊಂಚಲು ಗೊಂಚಲಾಗಿಹ ಹಣ್ಣು ಹಣ್ಣಿನ ಸುಗ್ಗಿಯು,
ನೆಳಲು ಬೆಳಕಿನ ಆಟವಾಡುತ ಗಾಳಿ ಸುಳಿಯುತಲಿರುವುದು,
ಚಿತ್ರ ಚಿತ್ರದ ರತ್ನಗಂಬಳಿ ಹಾಸಿ ತೋರುತಲಿರುವುದು.'

**ದೊರೆಯ ಒಪ್ಪಿಗೆ:**

'ದೊರೆಯು ಮನಕಿದು ಬಂದಿತಾದೊಡೆ ಚೀಣ ದೇಶದ
ಚಿತ್ರದಾಲಯವಾಗಿ ಮೆರೆಯುವುದಲ್ಲವೆ!
ಜನರ ಮನಕಿದು ಬರದೆ ಹೋಗುವುದೆಂತೊ ಕಾಣೆನು
ಹೂಗಳೆಡೆಯೊಳು ಮನಗಳರಳುವವಲ್ಲವೆ!
ಸಅದ ದೊರೆಯಾ ಪಾವನಾಂಕಿತ ಮೊದಲೊಳಿರುತಿರೆ
ಗ್ರಂಥದೇಳಿಗೆಗೊಳಿತು ಶಕುನವಿದಲ್ಲವೆ!'

ಮಂತ್ರಿಯ ಒಪ್ಪಿಗೆಯನ್ನು ಕೋರುತ್ತಾ ಕವಿ, 'ರಾಜಾಧಿರಾಜ ಸಂಮಾನ್ಯ ಅಬೂಬಕರ್ ಬಿನ್ ಅಬೂನಸರನ ಒಪ್ಪಿಗೆಯೆಂಬ ಒಡವೆಯನು ಧರಿಸಿದಲ್ಲದೆ ತನ್ನ ಸೊಬಗಿನ ಕುಂದು ತಾನರಿತ ಎನ್ನ ವಾಣಿಯೆಂಬ ಹಸೆಮಣೆಯ ಹೆಣ್ಣು ಕಿರುದನಿಯಲ್ಲಿ ನಾಚಿ ಹಾಡುವುದನ್ನು ಬಿಟ್ಟು ತಲೆಯೆತ್ತಿ ಅರಳಿದ ಮೊಗದಿಂದ ಚೆಲುವಿನ ಸಂದಣಿಗೆ ಬರಲು ಅಂಜುತಿಹಳು' ಎನ್ನುತ್ತಾನೆ.

ಕವಿಗೆ ತನ್ನ ಮಾತಿನಲ್ಲಿ ನಮ್ರತೆಯ ಜೊತೆಗೆ ನಂಬಿಕೆಯಿದೆ. ಕಡೆಯಲ್ಲಿ ಹೇಳುತ್ತಾನೆ:

'ಎನ್ನ ಮೈಕಣಕಣವು ಹುಡಿಯಾದರೇನಂತೆ,
ಜೀವಿಪವು ಕಾಲ ಕಾಲಕ್ಕೆ ಈ ಬರಹಗಳು;
ಎನ್ನ ಜೀವದ ನೆನಪು ಈ ಚಿತ್ರವಾಗಿಹುದು,
ಎನಿತು ಕಾಲದವರೆಗೆ ಉಳಿಯುವುದೊ ನಾ ಕಾಣೆ,
ಉಳಿವಿದಕೆ ಹೃದಯದ ವಿಶಾಲತೆಯೊಳೊಬ್ಬಾತ
ಬಡವನಾ ಕೃತಿಗಾಗಿ ಪ್ರಾರ್ಥನೆಯ ಗೈದಂದು.

ಆಗ ಹಬ್ಬದ ಕಾಲ ಮುಗಿಯಿತೀ ಹೊತ್ತಗೆಯು
ಆರ್ನೂರ ಐವತ್ತು ಮತ್ತಾರು ಹಿಜರಿಯಲಿ.
ನೀತಿಯನು ಹೇಳುವಾಶಯವಿತ್ತು, ನುಡಿದಾಯ್ತು,
ನುಡಿಗಳನು ದೇವರಿಚ್ಛೆಗೆ ಬಿಟ್ಟು ನಡೆದಾಯ್ತು.'

೩

ಈ ಗುಲಿಸ್ತಾನ್ ಗ್ರಂಥದಿಂದ ಆಯ್ದ ಕೆಲವು ಕತೆಗಳನ್ನು ಈ ಪುಸ್ತಕದಲ್ಲಿ ಕೊಟ್ಟಿದೆ. ಈ ಕತೆಗಳಲ್ಲಿ ಹಲವನ್ನು ಹಿಂದೆ 'ಕನ್ನಡ ನುಡಿ'ಯಲ್ಲಿ ಪ್ರಕಟಿಸಲಾಗಿತ್ತು. ಸಂಪಾದಕರ ಸಹೃದಯತೆಯನ್ನು ನೆನೆಯಬೇಕಾದದ್ದು ಕರ್ತವ್ಯ........... ಅನುವಾದಕ.

## ಶಾಂತಿಯ ಸುಳ್ಳು

ಒಬ್ಬ ದೊರೆ ತನ್ನ ಕೈಗೆ ಸಿಕ್ಕಿದ್ದ ಒಬ್ಬ ಸೆರೆಯಾಳನ್ನು ಕೊಂದುಬಿಡ ಬೇಕೆಂದು ಆಜ್ಞೆ ಮಾಡಿದ. ಆ ಮನುಷ್ಯನಿಗೆ ದಿಕ್ಕುಕಾಣದೆ ನಿರಾಶೆ ಯಾಗಿ ಅರಸನನ್ನು ತನ್ನ ಭಾಷೆಯಲ್ಲಿ ಬೈದು ಕೆಟ್ಟ ಮಾತುಗಳನ್ನಾಡಿದ. ಜೀವವನ್ನು ಕೈತೊಳೆದುಬಿಟ್ಟ ಮನುಷ್ಯ ಮನಸ್ಸಿಗೆ ಬಂದುದನ್ನು ಹೇಳು ವುದಕ್ಕೆ ಹಿಂಜರಿಯ ಎಂದು ಬಲ್ಲವರು ಹೇಳಿಯೇ ಇದ್ದಾರೆ.

ಓಡುವನು ಮಾನವನಪಾಯದಲಿ, ಆಗದಿರೆ
ಕೈ, ತಾನೆ, ಕತ್ತಿಯನು ಝಳಪಿಸುತ ನಿಲ್ಲುವುದು.

ಇವನು ಏನು ಹೇಳುತ್ತಿದ್ದಾನೆ ಎಂದು ದೊರೆ ಕೇಳಿದ. ಒಬ್ಬ ಮಂತ್ರಿ, ಒಳ್ಳೆಯವನು, ನುಡಿದ: ''ಒಡೆಯ, ಈ ಮನುಷ್ಯ ಹೇಳಿ ದ್ದಾನೆ, 'ಬಂದ ಕೋಪವನ್ನು ತಡೆದು ಇತರರನ್ನು ಮನ್ನಿಸುವ ಧಾರಾಳಿ ಗಳಿಗಾಗಿಯೇ ಸ್ವರ್ಗ ಇರುವುದು. ದೇವನು ಅಂತಹವರನ್ನು ಖಂಡಿತ ವಾಗಿ ಸಲಹುತ್ತಾನೆ' ಎಂದು.'' ದೊರೆಗೆ ಮರುಕವಾಯಿತು. ಅವನ ರಕ್ತವನ್ನು ಹರಿಸಬೇಡಿ ತಡೆಯಿರಿ ಎಂದು ನಿಲ್ಲಿಸಿದ. ಎದುರು ಕಕ್ಷಿಯ ಮಂತ್ರಿಯೊಬ್ಬ ತಟ್ಟನೆ ಹೇಳಿದ: 'ನಮ್ಮಂತಹವರು, ಮಂತ್ರಿಗಳು ದೊರೆಗಳ ಎದುರಿನಲ್ಲಿ ಸತ್ಯವನ್ನಲ್ಲದೆ ಬೇರೆ ನುಡಿಯುವುದು ಸಲ್ಲದು. ಈ ಪಾಪಿ ಸ್ವಾಮಿಯನ್ನು ಬೈದು ಆಡಬಾರದುದನ್ನು ಆಡಿದ್ದಾನೆ.' ಈ ಮಾತನ್ನು ಕೇಳಿ ದೊರೆಗೆ ಕೋಪ ಬಂದಿತು. ಹೇಳಿದ: 'ಅಯ್ಯಾ ನಿನ್ನ ಈ ನಿಜಕ್ಕಿಂತಲೂ ಹೆಚ್ಚಾಗಿ ಆತ ಹೇಳಿದ ಸುಳ್ಳಿನಿಂದಲೆ ನನ್ನ ಮನಸ್ಸಿಗೆ ಸಂತಸವಾಯಿತು. ಆ ಮಾತು ನೀತಿಯಲ್ಲಿ ಆಡಿದ್ದು, ಈ ಮಾತು ಕಿಚ್ಚಿನಿಂದ ಆಡಿದ್ದು. ಶಾಂತಿಗಾಗಿ ಆಡುವ ಸುಳ್ಳು ಜಗಳ ತೆಗೆಯುವ ನಿಜಕ್ಕಿಂತ ಮೇಲು ಎಂದು ಮತಿವಂತರು ಹೇಳಿದ್ದಾರೆ.'

ಮಂತ್ರಿಗಳು ಹೇಳಿದುದ ದೊರೆ ತಾನು ಮಾಡುವನು,
ದುಃಖಕರವದು ಮಂತ್ರಿಯೊಳ್ಳಿದನು ತೋರದೊಡೆ.

## ದೊರೆಯ ಕನಸು

ಖುರಾಸಾನ್ ಪ್ರಾಂತದ ಒಬ್ಬ ದೊರೆ. ಮಹಮುದ್ ಸಬಕ್ತಗೀನ ನನ್ನು ನೋಡಿದ ಕನಸಿನಲ್ಲಿ. ಅವನು ಸತ್ತು ಎಷ್ಟೋ ಕಾಲವಾಗಿತ್ತು. ಅವನ ಮೈ ಅಂಗಾಂಗವೆಲ್ಲ ಹರಿದು ಮಣ್ಣಾಗಿತ್ತು. ಕಣ್ಣುಗಳು ಮಾತ್ರ ಮೊದಲಿನಂತೆ ತಮ್ಮ ಗೂಡಿನಲ್ಲಿ ಅತ್ತ ಇತ್ತ ತಿರುಗಾಡುತ್ತ ಸುತ್ತಲೂ ನೋಡುತ್ತಿದ್ದವು. ಈ ಒಗಟನ್ನು ಬಿಡಿಸಲಾರದೆ ಪಂಡಿತರು ಮೌನ ತಾಳಿದ್ದರು. ಒಬ್ಬ ದರ್ವೀಷ ಕೈಮುಗಿದು ಹೇಳಿದ, 'ಆ ದೊರೆ ಇತರರು ತನ್ನ ರಾಜ್ಯವನ್ನು ಆಳುತ್ತಿದ್ದಾರಲ್ಲಾ ಎಂದು ಈ ಪರಿಯಾಗಿ ನೋಡುತ್ತಿದ್ದಾನೆ' ಎಂದು.

ಪೀದರೆಷ್ಟೋ ಮಂದಿ ಮಣ್ಣಿನಲಿ ಹೂಳಿದರು
ಬುವಿಯಮೇಲವರದೊಂದಾದರೂ ಗುರುತಿಲ್ಲ.
ಮಣ್ಣಿನಾ ಕೈಗಿತ್ತರವರವರ ದೇಹಗಳ
ತಿಂದಿತದು ಒಂದು ಮೂಳೆಯನಾದರಿಡಲಿಲ್ಲ.
ನೌಷೇರವಾನ್ ಅವನಿದ್ದನೆಂದೋಯೇನೊ
ಹೆಸರಿಹುದು ದಾನಿಯವನಾಗಿದ್ದ ಕಾರಣದಿ.
ಜೀವತಾನಿರುವಂದು ಒಳ್ಳಿದನು ಮಾಡಯ್ಯ
ಇಲ್ಲವಾದನು ಮನುಜ ಎಂದು ಸಾರುವ ಮುನ್ನ.

## ಆ ಕೈಯಿ—ಈ ಕೈಯಿ

ಹೊದೆಯುವ ಬಟ್ಟೆಗೆ ಅಂಚುಕಟ್ಟಿಸಿದ, ಬೆರಳಿಗೆ ಉಂಗುರವಿಟ್ಟ ಮೊದಲಿನವರಲ್ಲಿ ಮೊದಲನೆ ದೊರೆ ಜಮ್ಷೀದ್. ಅವನನ್ನು ಕೇಳಿದರು: 'ಆಭರಣವೆಲ್ಲ ಎಡಗೈಗೆ ತೊಡಿಸಿರುವೆ, ಬಲಗೈಯಿ ಮೇಲೆನಿಸಿದ್ದರೂ ಅದಕ್ಕೆ ಒಡವೆ ಇಲ್ಲದೆಹೋಯಿತು ಏಕೆ?' ಎಂದು. ದೊರೆ ಹೇಳಿದ: 'ಯಾವ ನ್ಯಾಯದಲ್ಲಾಗಲಿ, ಯಾವ ಕಾರ್ಯದಲ್ಲಾಗಲಿ ಅದು ಬಲಗೈಯ್ಯೇ ಅಲ್ಲವೆ? ಅದೇ ಅದರ ಹಿರಿಯತನ, ಅದೇ ಅದರ ದೊಡ್ಡ ಆಭರಣ' ಎಂದು.

ಇನ್ನೊಬ್ಬ ಹಿರಿಯನನ್ನು ಕೇಳಿದರು: 'ಕೆಲಸ ಕಾರ್ಯ ಎಲ್ಲ ಬಲಗೈಗೆ, ಆಭರಣ ಮಾತ್ರ ಎಡಗೈಗೆ ಏಕೆ?' ಎಂದು. ಹೇಳಿದ, 'ಗೊತ್ತಾಗ ಲಿಲ್ಲವೆ ನಿಮಗೆ, ಲೋಕ ಉತ್ತಮರನ್ನು ಅಷ್ಟಾಗಿ ಲಕ್ಷಿಸದು' ಎಂದು.

## ಚಿಕಿತ್ಸೆ

ಒಬ್ಬ ದೊರೆ ಅಜಮುದೇಶದ (ಪಾರಸಿದೇಶದ) ಸಾಮಾನ್ಯನೊಡನೆ ಒಂದು ನಾವೆಯನ್ನು ಹತ್ತಿದ. ಆ ಹುಡುಗ ಸಮುದ್ರವನ್ನು ನೋಡಿರಲಿಲ್ಲ. ಹಡಗಿನ ಅನುಭವ ಅವನಿಗೆ ಇರಲಿಲ್ಲ. ಅತ್ತು ಗೋಳಿಟ್ಟ. ಅವನ ಮೈಯೆಲ್ಲ ಅದುರಿ ನಡುಗುತ್ತಿತ್ತು. ದೋಣಿಯಲ್ಲಿದ್ದವರ ಹರುಷವೆಲ್ಲ ಹದಗೆಟ್ಟುಹೋಯಿತು. ದೊರೆಗೆ, ಅವನ ಪರಿವಾರದವರಿಗೆ ಯಾರಿಗೇನೂ ಉಪಾಯ ಹೊಳೆಯಲಿಲ್ಲ. ನಾವೆಯಲ್ಲಿ ಒಬ್ಬ ವೈದ್ಯ ಇದ್ದ. ಅರಿಕೆ ಮಾಡಿಕೊಂಡ: 'ಒಡೆಯರು ಆಗಲಿ ಎಂದರೆ ಇವನನ್ನು ಒಂದು ಉಪಾಯದಲ್ಲಿ ಸುಮ್ಮನಾಗಿಸುತ್ತೇನೆ' ಎಂದು. 'ದೊಡ್ಡ ಉಪಕಾರವಾಗುತ್ತದೆ, ಆಗಬಹುದು' ಎಂದ ದೊರೆ. ಪಂಡಿತನ ಮಾತಿನ ಮೇಲೆ ಕೆಲವರು ಅಳುತ್ತಿದ್ದ ಆಳನ್ನು ಹಿಡಿದು ಅವನನ್ನು ನೀರಿನೊಳಕ್ಕೆ ಎಸೆದುಬಿಟ್ಟರು. ಆಳು ಮುಳುಗಿ ತೇಲಿದ. ಹಲವು ಸಲ ಹೀಗೆ ಮುಳುಗಿ ತೇಲಿದ ಮೇಲೆ ಅವನನ್ನು ಸೆಳೆದುಕೊಂಡು, ಹುಟ್ಟುಹಾಕುವ ಹಿಡಿಗಳ ಆಸರೆಯಿಂದ ಮೇಲಕ್ಕೆ ಹತ್ತಿಸಿ ನಾವೆಯಲ್ಲಿ ಕೂಡಿಸಿದರು. ಆಳು ಉಸಿರೆತ್ತದೆ ಒಂದು ಮೂಲೆಹಿಡಿದು ಕುಳಿತುಕೊಂಡ. ದೊರೆಗೆ ಆಶ್ಚರ್ಯವಾಯಿತು. ಇದೆಂತಹ ಉಪಾಯವೆಂದು ಕೇಳಿದ. ಪಂಡಿತ ಉತ್ತರ ಹೇಳಿದ: 'ಈ ಮನುಷ್ಯ ನೀರಿನಲ್ಲಿ ಮುಳುಗಿ ತೇಲುವ ಕಷ್ಟ ಏನು ಎಂಬುದನ್ನು ಅನುಭವಿಸಿ ಇರಲಿಲ್ಲ. ನಾವೆಯ ಸುಖವೆಷ್ಟು ಎಂಬುದನ್ನು ಅರಿತಿರಲಿಲ್ಲ. ರೋಗವನ್ನು ಅನುಭವಿಸಿದ ಮೇಲೆ ಆರೋಗ್ಯದ ಸುಖವೆಷ್ಟು ಎಂದು ತಿಳಿದ ಜನರಂತೆ ಇವನಿಗೆ ಈಗ ಅರಿವಾಯಿತು. ಗೋಳಿಡುವುದನ್ನು ಬಿಟ್ಟು ಸುಮ್ಮನಾಗಿದ್ದಾನೆ' ಎಂದು.

ಹಸಿವ ಕಾಣದಗೇನು ಒಂದು ರೊಟ್ಟಿಯ ರುಚಿಯು,
ಎನ್ನ ಪ್ರೀತಿಯ ವಸ್ತು ನಿನಗೆ ಕಾಣದ ರೂಪು.
ಸಗ್ಗವಾಸಿಗೆ ಅಹುದು ಅಂತರಾಳವು ನರಕ,
ನರಕವಾಸಿಯ ಕೇಳೆ ಸಗ್ಗವೇ ಇದುಯೆಂಬ.

## ಪ್ರಾರ್ಥನೆ

ಒಬ್ಬ ದರ್ವೀಷ ಬಗ್ದಾದ ಪಟ್ಟಣಕ್ಕೆ ಬಂದ. ಅವನೊಂದು ಪ್ರಾರ್ಥನೆಯನ್ನು ಮಾಡಿಕೊಂಡನೆಂದಕೂಡಲೆ ದೇವನು ಅದನ್ನು ನಡೆಸಿ ಕೊಡುತ್ತಿದ್ದನೆನ್ನುವರು. ಹುಜ್ಜಾಜ ಯೂಸೊಫ್ ದೊರೆಗೆ ಇದನ್ನು ತಿಳಿಸಿದರು. ದೊರೆ ದರ್ವೀಷನನ್ನು ಕರೆಸಿ, 'ನನಗೆ ಸುಖ ಆಗುವಹಾಗೆ ಒಂದು ಪ್ರಾರ್ಥನೆ ಮಾಡು' ಎಂದ. 'ದೈವವೇ, ಈ ದೊರೆಯ ಜೀವವನ್ನು ಕೊಂಡುಹೋಗು' ಎಂದು ನುಡಿದ ಸಾಧು. 'ಇದೆಂತಹ ಹಾರೈಕೆ?' ಎಂದು ದೊರೆ ಪ್ರಶ್ನೆ ಮಾಡಿದ. ಸಾಧು ಹೇಳಿದ: 'ಒಪ್ಪಾದ ಪ್ರಾರ್ಥನೆ ಮಾಡಿದ್ದೇನೆ. ನಿನಗೂ ಸುಖವಾಗುತ್ತದೆ, ಎಲ್ಲ ಮುಸಲ್ಮಾನ ಪಂಗಡಕ್ಕೂ ಸುಖವುಂಟು.'

ಕೈಲಾಗದರ ಹಿಂಸಿಸುತ್ತಿರುವೆ ಎಲೆ ಕ್ರೂರಿ
ಎಷ್ಟುಕಾಲದವರೆಗೆ ನಡೆವುದೀ ವ್ಯಾಪಾರ?
ಆವ ದೈವಕೆ ಮೆಚ್ಚು ನಿನ್ನ ಈ ದೊರೆತನವು?
ಜನರಿಗೀ ಗೋಳೇಕೆ, ನಿನ್ನ ಸಾವೇ ಮೇಲು.

## ಹಿಜ್ಜಾಜ ಯಾತ್ರೆಯಲ್ಲಿ

ಹಿಜ್ಜಾಜ ಯಾತ್ರಿಕರಲ್ಲಿ ಒಮ್ಮೆ ಒಂದು ವಾದವಾಯಿತು. ನಾನೂ ಅವರೊಡನೆ ಇದ್ದೆ. ಆಡುತ್ತಾಡುತ್ತ ಮಾತು ಬಿಸಿಯಾಯಿತು. ಜಗಳವನ್ನು ನೋಡಿ ಒಂಟೆಯ ಬೆನ್ನಿನ ಮೇಲೆ ಒಂದು ತೊಟ್ಟಿಲಿನಲ್ಲಿ ಕುಳಿತಿದ್ದವನೊಬ್ಬ ಇನ್ನೊಂದು ತೊಟ್ಟಿಲಿನಲ್ಲಿ ಕುಳಿತಿದ್ದವನೊಡನೆ ಹೇಳಿಕೊಳ್ಳುತ್ತಿದ್ದ. 'ಚದುರಂಗದ ಆಟದಲ್ಲಿ ನೋಡು. ಆ ದಂತದ ಪೇದೆಗಳು (ಕಾಯಿಗಳು) ಮನೆಯಿಂದ ಮನೆಗೆ ಹತ್ತುತ್ತ ಹತ್ತುತ್ತ ಕಡೆಗೆ ರಾಣಿ ಪಟ್ಟಕ್ಕೆ ಏರಿ ಮೊದಲಿಗಿಂತಲು ಮೇಲು ಎನ್ನಿಸಿಕೊಳ್ಳುತ್ತಾರೆ. ಈ ಮಕ್ಕಾದ ಪೇದೆ ಗಳು (ಕಾಲ್ನಡಗೆಯವರು) ಮರಳುಕಾಡನ್ನೆ ದಾಟಿ ಬಂದಿದ್ದಾರೆ. ಆದರೂ ಮೊದಲಿಗಿಂತಲೂ ಒಂದುಮಟ್ಟ ಕೀಳಾಗಿದ್ದಾರಲ್ಲ!'

**ಸುಮ್ಮನೇ ಮಾತಾಡಿ ಗೆಳೆಯರನು ನೋಯಿಸುವ**
**ಯಾತ್ರೆಯವನಿಗೆ ಹೇಳು ನಾನು ಹೇಳಿದೆನೆಂದು.**
**ಹೊರೆ ಹೊತ್ತು ಮುಳ್ಳುಗಳ ತಿನ್ನುತ್ತ ಮೌನದಲಿ**
**ನಡೆಯುತಿಹ ಆ ವೊಂಟೆ ನಿನಗಿಂತ ಮೇಲೆಂದು.**

# ದುರ್ದಶೆ

ಒಮ್ಮೆ ಒಬ್ಬ ಸ್ನೇಹಿತ ಅವನ ದುರ್ದಶೆಯನ್ನು ಹೇಳಿಕೊಂಡು ನನ್ನ ಹತ್ತಿರ ಬಂದ. 'ಸಂಸಾರ ಬೆಳೆದಿದೆ. ತಿನ್ನುವುದಕ್ಕಿಲ್ಲ. ನನಗಿಷ್ಟು ಲೆಕ್ಕ ಪತ್ರ ಇಡುವುದು ಗೊತ್ತು. ನೀನು ಹೇಳಿದರೆ ನನಗೆ ಅಧಿಕಾರಿಗಳು ಒಂದು ಸ್ಥಳವನ್ನು ಕೊಡಬಹುದು ನೋಡು' ಎಂದು.

ಅವನಿಗೆ ಹೇಳಿದೆ ನಾನು : 'ಅಣ್ಣ, ದೊರೆಯ ಹತ್ತಿರ ಇರುವ ಕೆಲಸ. ಅದರಿಂದ ಜೀವನ ನಡೆಯುವುದೂ ಉಂಟು, ಹಾಗೆಯೇ ಅದರಿಂದ ಜೀವಕ್ಕೆ ಭೀತಿಯೂ ಉಂಟು.' ಅವನೆಂದ:

'ಸತ್ಯವಾಗಿರೆ ನೀನು ಆರ ಭೀತಿಯು ಏನು ?
ಮಲಿನ ವಸ್ತ್ರಕೆ ತಾನೆ ಅಗಸನೊಗೆಯುವ ಏಟು ?'

ಹೇಳಿದೆ: "ಆ ನರಿಯ ಕತೆ ನಿನಗೆ ಹೊಂದುವುದು. ಬೀಳುತ್ತ ಏಳುತ್ತ ಓಡುತ್ತಿತ್ತು ಪ್ರಾಣಿ. ಯಾರೋ ಅದನ್ನು ಕೇಳಿದರು: 'ಏನು ಇಷ್ಟು ಹೆದರಿಕೆ ನಿನಗೆ? ಏನು ಅಪಾಯ ಬೆನ್ನುಹತ್ತಿದೆ?' ಎಂದು. ಹೇಳಿತು: 'ಒಂಟೆಯನ್ನು ಹಿಡಿಯುವುದಕ್ಕೆ ಬರುತ್ತಿದ್ದಾರೆ' ಎಂದು. ಕೇಳಿದರು: 'ನಿನಗೂ ಒಂಟೆಗೂ ಏನು ಬಾಂಧವ್ಯ? ನೀನೇನು ಒಂಟೆಯಂತೆ ಇದ್ದೀಯಾ?' ಎಂದು. ನರಿ ಹೇಳಿತು: 'ಸುಮ್ಮನಿರಿ, ಯಾರಾದರೂ ದ್ರೋಹಿಗಳು ನಾನು ಒಂದು ಸಣ್ಣ ಒಂಟೆಯೇ ಸರಿ ಎಂದು ಹಟ ಹಿಡಿದರೆ ನನ್ನನ್ನು ಒಯ್ಯದೆ ಬಿಡರು. ಆಗ ಏನು, ಎಂತು ಎಂದು ನನ್ನನ್ನು ಕೇಳುವರು ಯಾರು?' ಹಾಗೆ, ಏನೇ ಆಗಲಿ ಒಮ್ಮೆ ದೊರೆಯ ಎದುರಲ್ಲಿ ನೀನೇನಾದರು ತಪ್ಪಿದವನು ಎಂದು ನಿಂತರೆ ನಿನ್ನ ಪಕ್ಷ ಹಿಡಿದು ಮಾತನಾಡುವವನು ಯಾವನು? ಅದಕ್ಕೇ ನಾನು ಹೇಳುವುದು, ತೃಪ್ತಿಯನ್ನು ಗಳಿಸುವುದೇ ಒಳ್ಳೆಯದು."

**ನೋವ ಸಹಿಸುವೆನೆಂಬ ಶಕ್ತಿ ನಿನಗಿರದಂದು**
**ಚೇಳಿನಾ ಬಿಲದೊಳಗೆ ಕೈ ಇಡಲು ಬೇಡಣ್ಣ.**

# ಮುನ್ನೂರ ಅರವತ್ತು ಪಟ್ಟಿನ ಕತೆ

ಒಬ್ಬ ಗರುಡಿಯಲ್ಲಿ ಬಹಳ ಹೆಚ್ಚಿನ ಪ್ರಾವೀಣ್ಯತೆ ಪಡೆದಿದ್ದ. ಮುನ್ನೂರ ಅರವತ್ತು ಪಟ್ಟುಗಳನ್ನು ತಿಳಿದಿದ್ದ. ವರ್ಷದ ಮೊದಲಿನಿಂದ ಕಡೆಯವರೆಗೆ ದಿನಕ್ಕೊಂದು ಹೊಸ ಪಟ್ಟು ತೋರಿಸುತ್ತಿದ್ದ. ಒಬ್ಬ ಶಿಷ್ಯನನ್ನು ನೋಡಿ ಅವನಿಗೆ ಸಂತೋಷವಾಯಿತು; ಆ ಯುವಕನಿಗೆ ಮನಸ್ಸಿಟ್ಟು ಮುನ್ನೂರ ಐವತ್ತೊಂಭತ್ತು ಪಟ್ಟುಗಳನ್ನು ಕಲಿಸಿದ. ಒಂದು ಪಟ್ಟನ್ನು ಮಾತ್ರ ಕಲಿಸದೆ ಬಿಟ್ಟಿದ್ದ. ಆದರೂ ಆ ಯುವಕ ಬಲವಂತನಾಗಿದ್ದ. ಗರುಡಿಯಲ್ಲಿ ತನ್ನ ವಯಸ್ಸಿನವರ್ಯಾರೂ ಅವನಿಗೆ ಸರಿತೂಗುವಂತಿರಲಿಲ್ಲ. ಹೆಮ್ಮೆ ಉಕ್ಕುತ್ತಾ ಹೋಯಿತು. ಒಮ್ಮೆ ಆ ಯುವಕ ದೊರೆಯ ಎದುರಿನಲ್ಲೇ ಹೇಳಿದ: 'ಗರುಡಿಯನ್ನು ಕಲಿಸಿದವನ ಮಾತು ತಾನೇ ಏನು? ಅವನು ಹಿರಿಯ, ಆಚಾರ್ಯ, ಎಂದು ಸುಮ್ಮನಿದ್ದೇನೆ. ಬಲದಲ್ಲಿ ನೋಡಿ, ಯುಕ್ತಿಯಲ್ಲಿ ನೋಡಿ, ಪಟ್ಟಿನಲ್ಲಿ ನೋಡಿ ಅವನಿಗೂ ನಾನೇನು ಕಡಮೆ ಇಲ್ಲ.' ಅರಸನಿಗೆ ಈ ಮಾತು ಒಪ್ಪಲಿಲ್ಲ. ಶಿಷ್ಯನೂ ಆಚಾರ್ಯನೂ ಇಬ್ಬರೂ ಎದುರಾಗಲಿ ಎಂದು ಆಜ್ಞೆಯಾಯಿತು. ವಿಶಾಲವಾದ ಗರುಡಿಯ ಅಂಗಳ ಸಜ್ಜಾಯಿತು. ಊರಿನಲ್ಲೆಲ್ಲಾ ಸಾರಿದರು. ಆಟ ಹೇಗೆ ನಡೆಯುವುದೊ ನೋಡಬೇಕು ಎಂದು ರಾಜನ ಆಸ್ಥಾನದವರೆಲ್ಲ ಸೇರಿದರು. ಪ್ರೇಕ್ಷಕರ ಎದುರಿನಲ್ಲಿ ಗರುಡಿಯ ಪೂಜೆ ನಡೆಯಿತು. ಆಗಲಿ ಎಂದೊಡನೆ ಯುವಕನು ತಾನೊಂದು ಮದಿಸಿದಾನೆಯೊ ಎಂಬಂತೆ ಆಚಾರ್ಯನ ಮೇಲೆ ನುಗ್ಗಿ ಬಂದನು. ನುಗ್ಗಿದ ರಭಸಕ್ಕೆ ಗಡುಸಾದ ಲೋಹದ ಬೆಟ್ಟ ಬುಡ ಕದಲಿ ಉರುಳಿಹೋಗಿಬಿಡಬಹುದಿತ್ತು. ಆಚಾರ್ಯನಿಗೆ ತಿಳಿದಿತ್ತು ಯುವಕನೇ ಹೆಚ್ಚು ಬಲವಂತನೆಂದು. ಆದ್ದರಿಂದ ಉಪಾಯಮಾಡಿ ಇಷ್ಟು ದಿನ ತನ್ನಲ್ಲೇ ಅಡಗಿಸಿ ಇಟ್ಟುಕೊಂಡಿದ್ದ ರಹಸ್ಯದ ಪಟ್ಟಿನಿಂದ ಯುವಕನನ್ನು ಮೇಲಕ್ಕೆತ್ತಿ ಕೆಳಕ್ಕೆ ಉರುಳಿಸಿದನು. ಅವನಿಗೆ ಗುಟ್ಟು ತಿಳಿಯದ್ದರಿಂದ ಯುವಕ ನಿರ್ವಾಹವಿಲ್ಲದೆ ಬಿದ್ದುಬಿಡಬೇಕಾಗಿ ಬಂದಿತು. ಪ್ರೇಕ್ಷಕರು ಗಹಗಹಿಸಿ ನಕ್ಕರು. ದೊರೆ ಯುವಕನನ್ನು ಜರೆದು ಹೇಳಿದ, 'ನೋಡು, ಗುರುವಿನೊಡನೆಯೇ ಪಂಥ ಹೂಡಿದೆ. ಬರಿ ಹೆಮ್ಮೆ ಆಯಿತು.' ಯುವಕ ಹೇಳಿದ: 'ಒಡೆಯ, ಬಲವಿತ್ತು

ಎಂದು ಆತ ಗೆಲ್ಲಲಿಲ್ಲ. ಗರುಡಿಯನ್ನು ಕಲಿಸುವಾಗ ಒಂದು ಗುಟ್ಟನ್ನು ಮಾತ್ರ ಇಂದು ಕಲಿಸುತ್ತೇನೆ ನಾಳೆ ಕಲಿಸುತ್ತೇನೆ ಎಂದು ತನ್ನಲ್ಲೇ ಇಟ್ಟುಕೊಂಡಿದ್ದು ಈ ದಿನ ಅದನ್ನು ಉಪಯೋಗಿಸಿ ನನ್ನನ್ನು ಸೋಲಿಸಿದ್ದಾನೆ, ಅಷ್ಟೇ.' ಗುರು ಹೇಳಿದ: "ಈ ದಿನಕ್ಕಾಗಿಯೇ ಆ ಗುಟ್ಟನ್ನು ಇಟ್ಟುಕೊಂಡಿದ್ದೆ. ಅರಿತವರು ಹೇಳಿದ್ದಾರೆ, 'ಇರುವುದೆಲ್ಲವನ್ನೂ ತೋರಿಸಿಕೊಡಬೇಡ. ಕಲಿತವನು ತಿರುಗಿಬಿದ್ದರೆ ಏನಾದರೂ ಕೆಡಕು ಮಾಡಲವಕಾಶವಾಗುವುದು' ಎಂದು. ತಾನು ಸಾಕಿದ ಶಿಷ್ಯ ತನಗೆ ಎರಡು ಬಗೆದರೆ ಸಲಹಿದವನು ಹೇಳಿದ್ದೇ ನ್ಯಾಯ:

'ಇರಲೆಯಿಲ್ಲವೊ ಏನೊ ಲೋಕದಲಿ ನಂಬಿಕೆಯು,
ಬಳಕೆಯುಲಿ ಇರದಾಯ್ತು ಈಗಿನ ಸಮಾಜದಲಿ.
ಎನ್ನನೇ ತನ್ನ ಅಂಬಿಗೆ ಗುರಿಯುಮಾಡದವ
ನೊಬ್ಬನಿಲ್ಲೆನ್ನಲ್ಲಿ ಬಿಲ್ಲುಗಾರಿಕೆ ಕಲಿತು'."

## ಉಪದೇಶ

ನ್ಯಾಯವಿಲ್ಲದ ಒಬ್ಬ ದೊರೆ ಒಬ್ಬ ಸಾಧುವನ್ನು ಕೇಳಿದ: 'ಎಲ್ಲ ಪ್ರಾರ್ಥನೆಗಳೊಳಗೆ ಯಾವುದು ಮೇಲು' ಎಂದು. 'ಅರ್ಧ ಹಗಲು ಮಲಗಿ ನಿದ್ರೆಮಾಡಿದರೆ ನಿನಗೆ ಅದೇ ಪ್ರಾರ್ಥನೆಗಳೊಳಗೆಲ್ಲ ಪೂಜ್ಯತಮವಾದದ್ದು, ಆಗಲಾದರು ನೀನು ಜನಗಳನ್ನು ಗೋಳಿಡಿಸದೆ ಇರುವೆಯಲ್ಲಾ!' ಎಂದ ಸಾಧು.

## ಕೃತಜ್ಞತೆ

ಕಾಲ ತಿರುಗಿತು ಎಂದು ಅತ್ತು ಗೋಳಾಡಿದವ ನಾನಲ್ಲ, ದೈವಾಜ್ಞೆಗೆ ಬೇಸರಪಟ್ಟವನು ನಾನಲ್ಲ. ಆದರೂ ಒಮ್ಮೆ ನೊಂದುಕೊಳ್ಳುತ್ತ ಇದ್ದೆ, ಬರಿಕಾಲಿಗೆ ರಕ್ಷಣೆಯನ್ನು ಹೊಂದಿಸುವುದಕ್ಕಾಗದೆ. ಆಶೆ ನಿರಾಶೆಯಾಗಿತ್ತು. ಆಗ ಕಂಡೆ ಕಾಲೆ ಇಲ್ಲದವನೊಬ್ಬನನ್ನು. ದೇವನ ಕರುಣೆಯನ್ನು ಸ್ಮರಿಸಿದೆ, ಕಾಲುಕೊಟ್ಟಿರುವನಲ್ಲ ಪರಮಾತ್ಮ, ಪಾದರಕ್ಷೆ ಇಲ್ಲದೆ ಹೋದರೆ ಏನಂತೆ.

## ತೋರಿಕೆಯ ಮಾನವ

ಒಬ್ಬ ಬೂಟಾಟಿಕೆಯ ಮನುಷ್ಯ ಒಂದು ದಿನ ರಾಜನ ಅರಮನೆಗೆ ಹೋಗಿದ್ದ. ಊಟವನ್ನು ಮಾಡುವಾಗ ಹಸಿವನ್ನು ತಡೆದು ಸ್ವಲ್ಪವೇ ತಿಂದ. ಪ್ರಾರ್ಥನೆಗೆಂದು ನಿಂತಾಗ ದಿನಚರಿಯನ್ನು ಮೀರಿಸಿ ದೀರ್ಘವಾಗಿ ಧ್ಯಾನ ಮಾಡುವವನಂತೆ ತೋರಿಸಿಕೊಂಡ. ಅವನ ಮನಸ್ಸಿನಲ್ಲಿ ನೆರೆದಿದ್ದವರು ಏನು ಭಕ್ತಿವಂತ ಇವನು ಎಂದುಕೊಳ್ಳುವರೆಂದು.

ಹೆದರುವೆನು ಅರಾಬಿ ಕಾಬಾದ ಹಾದಿಯಿದು
ತಾನಲ್ಲ, ಆ ಸ್ಥಳವ ನೀ ಮುಟ್ಟಲಾರೆ.
ಈ ಹಾದಿ ಹೋಗುವುದು ತುರ್ಕಸ್ಥಾನದ ಕಡೆಗೆ
ನೀನೀಗ ದಾರಿಯನು ಬಿಟ್ಟು ಬಂದಿರುವೆ.

ತನ್ನ ಮನೆಗೆ ಹಿಂದಿರುಗಿದ ಮೇಲೆ ಆ ಮನುಷ್ಯ ಊಟಕ್ಕೆ ಬಡಿಸಿರಿ ಎಂದು ಕೇಳಿದ. ಮಗ, ಬುದ್ಧಿವಂತ, ಅರಮನೆ ಊಟ ತಿನ್ನದೆಬಂದದ್ದು ಏತಕ್ಕೆ ಎಂದು ಕೇಳಿದ. ಅವನು ಹೇಳಿದ: 'ಎಲ್ಲರೆದುರು ಉಪಯುಕ್ತವಾದದ್ದೊಂದನ್ನೂ ತಿನ್ನಲಾರದೆಹೋದೆ.' ಮಗ ಕೇಳಿದ: 'ಉಪಯುಕ್ತವಾದದ್ದೊಂದನ್ನೂ ಬಿಡದೆ ಪ್ರಾರ್ಥನೆ ಮಾಡಿಕೊಂಡದ್ದಾಯಿತಷ್ಟೆ!'

ಅಪುದಹುದು ಒಪ್ಪುಗಳ ಅಂಗೈಲಿ ತೋರಿರುವೆ
ನಿನ್ನ ಆ ತಪ್ಪುಗಳ ಕಂಕುಳಲಿ ಮರೆಸಿರುವೆ.
ಕಪಟಿಯೇ ನಿನಗೇನು ಕೊಳ್ಳುವುದು ಈ ನಾಣ್ಯ
ಬೇಕೆಂಬ ಕಾಲದಲಿ ಕೆಲಸಕ್ಕೆ ಬರುವುದನು!

## ಇನ್ನೊಂದು ಕತೆ

ಒಬ್ಬ ಪಂಡಿತ ಮಗನಿಗೆ ಹೇಳಿದ: 'ಹೆಚ್ಚು ತಿನ್ನಬೇಡ. ತಿಂದರೆ ಕೇಳು, ಆಲಸ್ಯವಾಗುತ್ತದೆ.' ಹುಡುಗ ಹೇಳಿದ, 'ತಾತ, ಹಸಿವು ಮನುಷ್ಯನನ್ನು ಕೊಲ್ಲುತ್ತದೆ. ಬಲ್ಲವರು ಹಸಿವಿನಿಂದ ಸಾಯುವುದಕ್ಕಿಂತ ಹೆಚ್ಚಾಗಿ ತಿಂದು ಉಂಡು ಸಾಯುವುದು ಮೇಲು' ಎಂದು ಹೇಳಿದ್ದಾರೆ. ತಂದೆ ಹೇಳಿದ: "ಕುರಾನನ್ನು ನಂಬೋಣ. ಅದರಲ್ಲಿ ಹೇಳಿದೆ, 'ತಿನ್ನಿ ಆದರೆ ಮೇರೆ ಅರಿಯದೆ ತಿನ್ನಬೇಡಿ' ಎಂದು."

## ಲೆಬನಾನಿನ ಸಾಧು

ಲೆಬನಾನ್ ಪರ್ವತದ ಸಾಧು ಒಬ್ಬ ಇದ್ದ. ಜನ ಅವನ ಉಪನ್ಯಾಸ ಗಳನ್ನು ಬಹಳವಾಗಿ ಮೆಚ್ಚಿದ್ದರು. ಅವನು ಮಾಂತ್ರಿಕನೆಂಬ ಪ್ರಖ್ಯಾತಿ ಅರೇಬಿಯದ ಮೂಲೆಮೂಲೆಗಳಲ್ಲಿ ಹಬ್ಬಿತ್ತು. ಒಂದು ದಿನ ಸಾಧು ದಾಮಿಷ್ಕ ಪಟ್ಟಣದ ಪ್ರಾರ್ಥನಾಲಯಕ್ಕೆ ಬಂದ. ಮಂದಿರದ ಕೊಳದಲ್ಲಿ ಕೈ ಕಾಲು ತೊಳೆಯುತ್ತ ಅದರೊಳಗೆ ಬಿದ್ದುಬಿಟ್ಟ. ಬಹಳ ಪ್ರಯಾಸ ದಿಂದ ಮೇಲಕ್ಕೆ ಎದ್ದುಬಂದದ್ದಾಯಿತು. ಪ್ರಾರ್ಥನೆಗಳೆಲ್ಲ ಮುಗಿದು ಜನ ಹಾಗೆ ನಿಂತಿರುವಾಗ ಒಬ್ಬಾತ ಕೇಳಿದ: 'ಪೂಜ್ಯರು ಅಪ್ಪಣೆಕೊಟ್ಟರೆ ಒಂದು ಮಾತು ಕೇಳಬೇಕೆಂದಿದ್ದೇನೆ. ಒಂದು ಸಂದೇಹ ಇದೆ' ಎಂದು. ಆಗಲಿ ಎನ್ನಲು ಅವನು ಹೇಳಿದ: 'ನೆನಪಾಯಿತು. ಪೂಜ್ಯಗುರು ಪಶ್ಚಿಮಸಾಗರದ ಮೇಲೆಲ್ಲ ಓಡಾಡಿದ್ದುಂಟಂತೆ, ಪರಮಗುರುವಿನ ಪಾದ ಒದ್ದೆಯಾಗದೆ ಇತ್ತಂತೆ. ಈ ಕೊಳದಲ್ಲಿ ಒಂದು ಆಳುದ್ದದ ನೀರಿಲ್ಲ, ಇಲ್ಲಿ ಹೀಗೆ ಮುಳುಗಿದ್ದು ಆಶ್ಚರ್ಯವಾಗಿದೆ.' ಆ ಸಾಧು ತಲೆಬಗ್ಗಿಸಿ ಧ್ಯಾನಮಾಡಿ ಮತ್ತೆ ಕತ್ತನ್ನೆತ್ತಿ ಹೇಳಿದ:

'ಸಗ್ಗಕೇರುವುದನ್ನ ಗೆಲುವಿನಾ ಮನವೊಮ್ಮೆ,
ಮುಂದಡಿಯು ಕಾಣದೆಲೆ ಬಳಲಿ ತಿರುಗುವುದೊಮ್ಮೆ!'

## ನೆನಪು

ಒಬ್ಬ ದೊರೆ ಒಬ್ಬ ಸಾಧುವನ್ನು ಕೇಳಿದ, 'ನನ್ನ ನೆನಪು ಎಂದಾ ದರೂ ಬರುತ್ತದೆಯೇ ನಿನಗೆ?' ಎಂದು. ಆ ಸಾಧು ಹೇಳಿದ: 'ಬರದೆ ಉಂಟೇ ಒಡೆಯ, ಖಂಡಿತ, ದೇವನನ್ನು ಯಾವಾಗ ಮರೆತರೆ ಆಗ ತಮ್ಮ ಧ್ಯಾನ ಬಂದೆ ಬರುತ್ತಿರುವುದು.'

ದೇವನಾವನ ತನ್ನ ಮನೆಯಿಂದಟ್ಟುತಿರುವನೊ ಅವನಿಗೆ,
ಎಲ್ಲ ಬಾಗಿಲಿಗಲೆದು ನೋಡುವ ಗತಿಯು ಬಂದಿಹುದವನಿಗೆ,
ದೇವನಾವನಿಗೀವನಾಸರೆ ತನ್ನ ಮನೆಯೊಳಗವನಿಗೆ,
ಹೋಗಲೀಯನು ಬೇರೆ ಮನೆಗಳ ಕಡೆಗೆ ದೇವನು ಅವನಿಗೆ.

# ಸಾದಿ ಸಂಗೀತಕ್ಕೆ ಹೋದದ್ದು

ಷೇಕ್ ಷಮ್ಸುದ್ದೀನ್ ಅಬುಲ್ಫರ್‌ಹ್ ಬಿನ್ ಜೋಸ್ಸಿ, ಕಟ್ಟುನಿಟ್ಟಿನ ಬೋಧಕನವನು. 'ದರ್ವೀಷರ ಕುಣಿತ ಮೆರೆತಗಳಿಗೆ ಹೋಗಬೇಡ. ಮೌನದಿಂದ ಮಠದೊಳಗೆ ಕುಳಿತು ಧ್ಯಾನ ಮಾಡುವುದು ಮೇಲು' ಎಂದು ಎಷ್ಟೆಷ್ಟೋ ಉಪದೇಶ ಮಾಡುತ್ತಿದ್ದ. ನನ್ನ ಕಿವಿಗೆ ಆ ಪಾಠವೇ ಮುಟ್ಟುತ್ತಿರಲಿಲ್ಲ. ಯುವಕತನದ ಹೆಮ್ಮೆಯೇ ಮೇಲುಗೈಯ್ಯಾಗುತ್ತಿತ್ತು. ಮನಸ್ಸು ಆಟಕ್ಕೇ ಒಲಿದು ನಡೆಯುತ್ತಿತ್ತು. ಗುರುದೇವ ಒಳ್ಳೆಯದಕ್ಕೆಂದು ಹೇಳಿದ ಮಾತುಗಳು ಎಲ್ಲಿಯೋ ಅಡಗಿ, ಕಾಲುಗಳು ತಾವಾಗಿ ಸಂಭ್ರಮದ ಕೂಟಗಳ ಕಡೆಗೆ ನಡೆಯುತ್ತಿದ್ದವು. ಹಿರಿಯನ ಉಪದೇಶ ಒಮ್ಮೆ ಜ್ಞಾಪಕಕ್ಕೆ ಬಂದರೆ ಗಟ್ಟಿಯಾಗಿ ಹೇಳಿಕೊಳ್ಳುತ್ತಿದ್ದೆ:

ಬೇಡಬೇಡೆಂಬವರು ಎಮ್ಮೊಡನೆ ಇರಲೊಮ್ಮೆ,
ಚಪ್ಪಳೆಯ ಹೊಡೆಯುತ್ತ ನಲಿದೊಲಿದು ನಗುತಿಹರು.
ಬಿಟ್ಟುಬಿಡು ಎಂಬರಿಗೆ ಮಧುಪಾನ ಸಿಗಲೊಮ್ಮೆ
ಮತ್ತೇರಿದವರ ಬಗೆ ಸಹಜವದು ಎನುತಿಹರು.

ಹೀಗೇ ಒಂದು ದಿನ ರಾತ್ರೆ ಸಂಭ್ರಮದ ಸಂದಣಿಯನ್ನು ಸೇರಿ ಅಲ್ಲಿ ಹಾಡುಗಾರನೊಬ್ಬನನ್ನು ಕಂಡೆ.

ಏನು ಹಾಡಿನ ಬಿಗಿಯು ಅವನ ಆಲಾಪನೆಗೆ
ಜೀವನದ ತಂತಿಯೇ ಹರಿದು ತುಂಡಾಗುವುದು.
ಅವನ ಆ ದನಿಯೇನು, ಏನಿನಿದು ಅರಾಗ,
ತಾಯ್ತಂದೆ ಸತ್ತೆಡೆಯ ತಬ್ಬಲಿಗಳತ್ತಂತೆ.

ಒಮ್ಮೆ ಕೇಳುವವರ ಕೈಬೆರಳುಗಳು ಇರುತ್ತಿದ್ದವು ಅವರವರ ಕಿವಿಗಳಲ್ಲಿ; ಇನ್ನೊಮ್ಮೆ ಮೌನವನ್ನು ಸಾರುತ್ತ ಅವರವರ ತುಟಿಗಳಲ್ಲಿ.

ಹಾಡುವವನೇ ಕೇಳು ನಿನ್ನ ಹಾಡಿನ ಇಂಪು
ಕೇಳುವರ ತಾಗದದು ನೀನು ಹೊರಡುವವರೆಗೆ.
ಏನುಂಟು ಮತ್ತೆ ಬರೆ ನಿನ್ನ ಪಯಣದ ವೇಳೆ,
ಗಾನದಾ ಸೊಂಪೆಲ್ಲ ತಾನಾಗಿ ಅಡಗುವುದು.
ಕೊಳಲ ಗಾನವ ಕೇಳಿ ಯಜಮಾನಗಿಂತೊರೆದೆ,
ಕೇಳಲಾರೆನು, ಕಿವಿಗೆ ರಸವನಾದರು ಹೊಯ್ಯಿ.
ಅಗದೊಡೆ ಬಾಗಿಲನು ತೆಗೆದೆನ್ನ ಬಿಟ್ಟುಬಿಡು.
ಓಡಿಹೋಗುವೆನಯ್ಯ ಈ ಗುಲ್ಲು ಕೇಳದೆಡೆ.

ಹೀಗಿತ್ತು ನನ್ನ ಮನಸ್ಸಿನ ಆಯಾಸ. ಗೆಳೆಯರ ಗುಂಪನ್ನು ಮೀರಲಾರದೆ ಇರುಳನ್ನು ಕಳೆದುದಾಯಿತು.

ಆಗೊ ಅಲ್ಲಿ ಮುವಜ್ಜೀನ ಪ್ರಾರ್ಥನೆಗೆ ಕರೆಯುವನು.
ಅವನಿಗೇನದು ಗೊತ್ತು ಇರುಳುಯೆಂತಾಯ್ತೆಂದು ?
ಎನ್ನ ಕಣ್ಣನು ಕೇಳು ರಾತ್ರಿಯಾ ಸುದ್ದಿಯನು
ಮುಚ್ಚಿದುದು ತಾನಿಲ್ಲ ಒಂದೆ ಕ್ಷಣ ಆ ಕಣ್ಣು.

ಈ ಬಗೆಯ ಜಾಗರಣೆಯನ್ನು ಮಾಡುತ್ತ ಬೆಳಗಾಯಿತು. ಹಾಡಿದ ವನನ್ನು ಅಪ್ಪಿ ಹರಸಿ ತಲೆಯುಡಪನ್ನು ತೆಗೆದು ಅದನ್ನು ಒಂದು ಹಣ ಸಹಿತ ಅವನಿಗೆ ಕೊಟ್ಟೆ. ನನ್ನ ಸ್ನೇಹಿತರು ಹಿಂದಿನಿಂದ ನಕ್ಕು ನನ್ನನ್ನು ಹಾಸ್ಯಮಾಡಿದರು. ಒಬ್ಬ ಹೇಳಿದ, 'ಇವನಿಗೆ ಈ ಉಡುಗೊರೆ ಕೊಟ್ಟು ನೀನು ಮತಿಹೀನನಾದೆ. ಅವನು ಕೈಯಲ್ಲಿ ಒಂದು ಹಣ ಹಿಡಿದು ಕಂಡರಿಯದವನು. ತನ್ನ ತಂಬೂರಿ ತುದಿಗೆ ಗುಲಗಂಜಿ ಬಂಗಾರ ತೊಡಿಸಿ ಅರಿಯದವನು. ಇಂದು ನಿನ್ನಿಂದ ಅವನಿಗೆ ಮರ್ಯಾದೆ ಸಂದಿತು.

'ಬರದಿರಲಿ ಬರದಿರಲಿ ಆವನಿಲ್ಲಿಗಿನ್ನೊಮ್ಮೆ,
ಒಂದೆಡೆಯೊಳಾರವನ ಎರಡು ಸಲ ಕಂಡವರು ?
ಒಂದೊಂದು ದನಿಯವನ ಬಾಯಿಂದೆ ಬಂದೊಡನೆ
ನೆಟ್ಟನೇ ನಿಂದಪವು ಕೇಳ್ದವರ ರೋಮಗಳು.
ಮನೆಯ ಮೇಲಿನ ಹಕ್ಕಿ ಹಾರಿಹೋಯಿತು ಹೆದರಿ,
ಸಿಟ್ಟು ಸಿರು ಮೇಲಾಗಿ ಮಿದುಳು ಸೋತಿತು ನಮಗೆ.'

ನಾನು ಹೇಳಿದೆ: 'ಈ ಮಾತು ಉಚಿತವಲ್ಲ. ಇಷ್ಟೆಲ್ಲಾ ಅದ್ಭುತ ವಾಗಿದ್ದರೆ ಅವನಲ್ಲಿ ದೊಡ್ಡ ಮಂತ್ರದ ಶಕ್ತಿಯೇ ಇರಬೇಕು.' ಮಾತಾಡಿ ದಾತನು ನುಡಿದ: 'ನೀ ಕಂಡ ಗುಟ್ಟು ಈಗಲೇ ತಿಳಿಸಿದರೆ ನಾವು ಆಡಿದ ತಪ್ಪು ಮನ್ನಿಸೆನ್ನಬಹುದು.' ಹೇಳಿದೆ: 'ಗುಟ್ಟೇನು ಹೆಚ್ಚಿಲ್ಲ, ಈಗಲೇ ಹೇಳುತ್ತೇನೆ. ನನ್ನ ಗುರು ದರ್ವೀಷರ ಕುಣಿತ ಮೆರತಕ್ಕೆ ಹೋಗದಿರು ಎಂದಿದ್ದರು. ಈ ರಾತ್ರಿ ಈ ಕೂಟಕ್ಕೆ ಬರುವವರೆಗೆ ಅವರ ಮಾತು ನನಗೆ ಅರ್ಥವಾಗಿರಲಿಲ್ಲ. ಈಗ ಈ ಮಾಂತ್ರಿಕನ ಕೈಮುಟ್ಟಿ ಆಣೆಮಾಡಿ ದ್ದೇನೆ, ಇಂತಹ ಹಾಡುಗಳ ಸಂದಣಿಗೆ ನಾನು ಮತ್ತೆ ಬರುವುದಿಲ್ಲ ವೆಂದು.'

ಮುದ್ದುಮೊಗ ಚೆಂದುಟಿಯು ಇಂಪಾದ ಕೊರಳಿಂದೆ
ಬರಲೊಂದು ಹಾಡದರ ಮಾಧುರ್ಯ ಬೇರಿಹುದು.
ಓಷಾಕ, ಇಸ್ಪಹಾನ್, ಹಿಜ್ಞಾಜ ರೀತಿಗಳು
ಸಂಗೀತ ಶಾಸ್ತ್ರವೆನೆ ಸೇರಿರಲು ಏನಂತೆ,
ಮನಕೆ ತಟ್ಟುತಲಿಹುದು ಸರಸ ಬೇಸರವಾಗಿ
ಈರೀತಿ ಅಣ್ಣಗಳು ಹಾಡಿದೊಡೆ ಕೇಳಯ್ಯ.

## ಸಾಧುಗಳಲ್ಲದ ಸಾಧುಗಳು

ಒಬ್ಬ ದೊರೆಗೆ ಒಂದು ಕಾರ್ಯದ ಚಿಂತೆ ಇತ್ತು. 'ಕಾರ್ಯವಾದರೆ ಸಾಧುಗಳಿಗೆ ಇಷ್ಟು ಹಣವನ್ನು ಕೊಡುವೆ'ನೆಂದು ಹರಸಿಕೊಂಡ. ಕಾರ್ಯ ಫಲಿಸಿತು. ಆಗ ಅವನು ಹರಸಿಕೊಂಡಂತೆ ಒಂದು ಹಣದ ಚೀಲವನ್ನು ಒಬ್ಬ ಸೇವಕನ ಕೈಗೆ ಕೊಟ್ಟು ಇದನ್ನು ಒಬ್ಬ ಸಾಧುವಿಗೆ ಕೊಟ್ಟು ಬಾ ಎಂದು ಹೇಳಿದ. ಸೇವಕ, ಬುದ್ಧಿವಂತ, ದಿನವೆಲ್ಲ ಪಟ್ಟಣದಲ್ಲಿ ಓಡಾಡಿ ಸಂಜೆಗೆ ಹಣವನ್ನು ಹಿಂದಕ್ಕೆ ತಂದು ಒಪ್ಪಿಸಿದ. ಹೇಳಿದ: 'ಎಷ್ಟೋ ಹುಡುಕಿದೆ, ಸಾಧುಗಳೆ ಸಿಕ್ಕಲಿಲ್ಲ.' ದೊರೆ ನುಡಿದ: 'ಏನು ಕತೆ? ನನಗೆ ತಿಳಿದಹಾಗೆ ಈ ಪಟ್ಟಣದಲ್ಲಿ ನಾನ್ನೂರು ಸಾಧುಗಳು ಇದ್ದಾರೆ.' ಸೇವಕನು ಹೇಳಿದ: 'ದೇವರೇ, ಸಾಧುಗಳು ಹಣ ತೆಗೆದುಕೊಳ್ಳರು. ಕೊಟ್ಟುಬಿಡು ಎನ್ನುವವರು ಸಾಧು ಸನ್ಯಾಸಿಗಳಲ್ಲ. ಏನು ಮಾಡಲಿ!' ದೊರೆ ನಕ್ಕು ಹೇಳಿಕೊಂಡ: 'ಸಾಧುಗಳು, ಭಾವುಕರು, ಎಂದರೆ ನನಗೆ ಎಷ್ಟು ಭಕ್ತಿಯುಂಟು, ಈ ಸೇವಕ ಅವರನ್ನು ಅಷ್ಟು ಹಳಿಯುತ್ತಿದ್ದಾನೆ. ನಿಜವಾಗಿ ನ್ಯಾಯವೇನೋ ಅವನ ಕಡೆಗೇ ಕಾಣುತ್ತಾ ಇದೆ. ಹೌದು.'

ಬೇಡಿ ಹಣವನು ಕೊಂಬ ಸಾಧುವನು ಬಿಟ್ಟುಬಿಡು,
ಬೇಕೆನಲು ನಿಜವಾದ ತ್ಯಾಗಿಯನು ನೀ ಹುಡುಕು.

## ತಿಂದವನು, ತಿನ್ನದವನು

ಖುರಾಸಾನ್ ಪ್ರಾಂತದ ದರ್ವೀಷರು ಇಬ್ಬರು ಒಟ್ಟಾಗಿ ಪ್ರಯಾಣ ಮಾಡುತ್ತಿದ್ದರು. ಒಬ್ಬ ತೆಳ್ಳಗೆ ಬಡವಾಗಿ ಕಾಣುತ್ತಿದ್ದ, ಮಿತಿಯನ್ನರಿತವನು, ಎರಡೆರಡು ದಿನಕ್ಕೊಂದು ಸಲ ಊಟ ಮಾಡುತ್ತಿದ್ದ. ಇನ್ನೊಬ್ಬ ಕೊಬ್ಬಿ ಬೆಳೆದವನು, ದಿನಕ್ಕೆ ಮೂರು ಸಲ ಊಟ ಮಾಡುತ್ತಾ ಇದ್ದ. ಇಬ್ಬರೂ ಒಂದು ಪಟ್ಟಣಕ್ಕೆ ಬಂದರು. ಗುಪ್ತಚಾರರು ಎಂದು ಅವರನ್ನು ಹಿಡಿದು ಸೆರೆಯಲ್ಲಿ ಹಾಕಿದರು. ಎರಡು ವಾರ ಹಾಗೇ ಇಟ್ಟಿದ್ದರು. ಆಮೇಲೆ ಅವರು ನಿರಪರಾಧಿಗಳೆಂದು ಗೊತ್ತಾಯಿತು. ಸೆರೆಯೊಳಗೆ ಹೋಗಿ ನೋಡುತ್ತಾರೆ, ಕೊಬ್ಬಿದ್ದ ದರ್ವೀಷ ಸತ್ತಿದ್ದ, ತೆಳ್ಳನೆಯ ದರ್ವೀಷ ಬದುಕಿದ್ದ. ಇದೇನಾಶ್ಚರ್ಯ ಎಂದರು. ಒಬ್ಬ ಪಂಡಿತ ಹೇಳಿದ, 'ಏನೂ ಆಶ್ಚರ್ಯ ಇಲ್ಲ, ಬೇರೆ ವಿಧವಾಗಿದ್ದರೆ ಆಶ್ಚರ್ಯವಿತ್ತು. ಹೆಚ್ಚಾಗಿ ತಿನ್ನುತ್ತಿದ್ದವನು ಸಹಿಸಲಾರದೆ ಸತ್ತಿದ್ದಾನೆ. ಉಪವಾಸ ಮಾಡಿ ಅಭ್ಯಾಸವಿದ್ದವನು ತಡೆದುಕೊಂಡು ಬದುಕಿದ್ದಾನೆ.'

ಸ್ವಲ್ಪವಾಗಿಯೆ ತಿಂದು ಮಿತಿಯೊಳಿರುವವನವನು,
ಕಷ್ಟವಾಗಿರಲಂದು ಸುಲಭದಲಿ ದಾಟುವನು.
ತಿಂದು ತಿಂದವನ ಆ ದೇಹ ಬೆಳಿಸಿದವ
ಬರಲು ಕಷ್ಟದ ವೇಳೆ ಸಾಯುವನು ಸಹಿಸದೆಲೆ.

## ರಾತ್ರಿಯ ಎಚ್ಚರ

ಒಬ್ಬ ಆಬಿದನ (ಸಾಧುವಿನ) ಕತೆ. ರಾತ್ರೆ ಹತ್ತುಸೇರಿನ ಊಟ ಮಾಡುವನಂತೆ. ಮತ್ತೆ ಬೆಳಗಿನವರೆಗೆ ಕುರಾನನ್ನೆಲ್ಲಾ ಹೇಳುತ್ತಾ ಎಚ್ಚರವಾಗಿರುವನಂತೆ. ಒಬ್ಬ ಸಾಧು ಇದನ್ನು ಕೇಳಿ ಹೇಳಿದ, 'ಅರ್ಧರೊಟ್ಟೆಯಷ್ಟೇ ತಿಂದು ಮಲಗಿ ನಿದ್ರೆಮಾಡಿದರೆ ಘನವಾದ ಪುಣ್ಯ ಬಂದೀತು.

'ಸ್ಥಳವಿರಲುಬೇಕಯ್ಯ ನಿನ್ನ ಹೊಟ್ಟೆಯ ಒಳಗೆ,
ಒಳ್ಳಿದನು ಮಾಡಿದ್ದಾ ಬೆಳಕಲ್ಲಿ ಬೆಳಗುವುದು.
ನಿನಗೆ ವಿದ್ಯೆಯು ಇಲ್ಲ, ಬುದ್ಧಿಯೂ ತಾನಿಲ್ಲ
ಬಾಯಿಯಾವರೆಗೆಲ್ಲ ಬರಿ ಅನ್ನ ತುಂಬಿಹುದು.'

## ಮಗಳು—ಅಳಿಯ

ಒಬ್ಬ ನ್ಯಾಯಪಂಡಿತ. ಅವನಿಗೆ ಒಬ್ಬಳು ಮಗಳು. ಅವಳ ರೂಪ ಕೇಳಬಾರದು. ವಯಸು ಮೀರುತ್ತಿತ್ತು. ಧನಕನಕ ಇದ್ದು ಏನು, ಕೈಹಿಡಿಯಲು ಒಪ್ಪಿದವರು ಇರಲಿಲ್ಲ.

ರೂಪವಿಲ್ಲದ ಹೆಣ್ಗೆ ವಸ್ತ್ರ ಒಡವೆಯ ತೊಡಿಸೆ
ಮುಚ್ಚದು ಕರಾಳತನ ಅದು ಎದ್ದು ಕಾಣುವುದು.

ನಿರ್ವಾಹವಿಲ್ಲದೆ ಆ ಹೆಣ್ಣನ್ನು ಒಬ್ಬ ಕುರುಡನಿಗೆ ಮದುವೆ ಮಾಡಿದರು. ಒಂದು ದಿನ ಆ ಊರಿಗೆ ಒಬ್ಬ ಪಂಡಿತ ಸರಾಂದೀಪ (ಸಿಲೋನ್) ದಿಂದ ಬಂದ, ದೃಷ್ಟಿವೈದ್ಯ ಬಲ್ಲವನು. ನ್ಯಾಯಪಂಡಿತನಿಗೆ ಹೇಳಿದರು ಅಳಿಯನನ್ನು ನೇತ್ರಪಂಡಿತನಿಗೆ ತೋರಿಸತಕ್ಕುದೆಂದು. ನ್ಯಾಯಪಂಡಿತ ಹೇಳಿದ: 'ಎಲ್ಲಾ ಸರಿ, ಅಳಿಯನಿಗೆ ಕಣ್ಣು ಬರುವುದೆಂದರೆ ನನಗೇಕೊ ಭೀತಿಯಾಗುತ್ತದೆ. ಹಾಗಾದರೆ ಅವನು ನನ್ನ ಮಗಳನ್ನು ಬೇಸರದಿಂದ ಬಿಟ್ಟುಬಿಡಬಹುದು.'

ರೂಪವಿಲ್ಲದ ಆಕೆ ಹೆಂಡತಿಯು ತಾನಾಗೆ,
ಗಂಡನಾದವನವನು ಕುರುಡನಾಗಿರಬೇಕು.

## ಸ್ವಾತಂತ್ರ್ಯ

ಹಾತಿಮನನ್ನು ಕೇಳಿದರು 'ನಿನಗಿಂತಲು ಸ್ವತಂತ್ರನಾದವನನ್ನು ಕಂಡಿದ್ದರೆ ಅಥವಾ ಕೇಳಿದ್ದರೆ ಹೇಳು' ಎಂದು. ಹೇಳಿದ "ಆ ದಿನ ಅರಬ ಮುಖ್ಯರನ್ನೆಲ್ಲಾ ಕರೆಸಿ ನಲವತ್ತು ಒಂಟೆಗಳ ಔತಣ ಮಾಡಿಸಿದೆ. ಆಮೇಲೆ ಹಾಗೇ ಕಾಡಿನ ಕಡೆ ಹೋಗಿದ್ದೆ. ಅಲ್ಲೊಬ್ಬ ಕಟ್ಟಿಗೆ ಒಡೆಯುವವನು ಇದ್ದ. ಅವನಿಗೆ ಹೇಳಿದೆ: 'ಅಗೊ ಅಲ್ಲಿ ಹಾತಿಮ್ ಔತಣ ಏರ್ಪಡಿಸಿದ್ದಾನೆ. ಎಷ್ಟೋ ಮಂದಿ ನೆರೆದಿದ್ದಾರೆ. ನೀನೂ ಹೋಗಬಾರದೆ ಸುಖವಾಗಿ?' ಎಂದು. ಹೇಳಿದ:

'ತನ್ನ ದುಡಿತದ ರೊಟ್ಟಿ ತನಗಿರಲು
ಹಾತಿಮನ ಹಂಗೇನು?'

ಅಗೋ, ಅವನಲ್ಲಿ ನನಗಿಂತಲೂ ಸ್ವತಂತ್ರನಾದವನನ್ನು ಕಂಡೆ."

# ಬಲಹೀನ

ಒಬ್ಬ ಬಲಹೀನ ಒಂದು ಬಲೆ ಒಡ್ಡಿದ. ಬಲೆಯೊಳಗೆ ಒಂದು ಬಹಳ ದೊಡ್ಡ ಮೀನು ಬಂತು. ಮೀನು ಒಳ್ಳೇ ಗಟ್ಟಿಯಾಗಿತ್ತು; ಅದರ ಬಲವೇ ಮೇಲಾಯಿತು: ಬಲೆ ಒಡ್ಡಿದವನ ಕೈಬಿಟ್ಟುಹೋಯಿತು.

ಹೊಳೆಗೆ ಹೋದನು ಆಳು ನೀರ ತರುವೆನುಯೆಂದು,
ಹೊಳೆಯುಬ್ಬಿ ಹರಿಯಿತದು ಆಳನೊಡನೆಯೆ ಒಯ್ದು.
ದಿನ ದಿನವು ಬಲೆ ತಾನು ಮೀನುಗಳ ತರುತಿಹುದು.
ಇಂದು ಓಡಿತು ಮೀನು, ಬಲೆಯನೊಯ್ದಿತು ಜೊತೆಗೆ.
ಬೇಟೆ ದಿನ ದಿನವೇನು ಬೇಟೆಗಾರಗೆ ಉಂಟೆ?
ಹುಲಿಯು ವನನೊಂದು ದಿನ ನುಂಗಿಬಿಡಬಹುದಯ್ಯ.

ಇತರ ಅಂಬಿಗರೆಂದರು: 'ಎಲೊ ಎಂತಹಾ ಮೀನು ಬಲೆಯೊಳಗೆ ಬಂದಿತ್ತು? ಅಂತಹುದನ್ನು ಹಿಡಿಯಲಾರವೆ ಹೋದೆ.' ಬಲಹೀನ ಹೇಳಿದ,

'ಏನು ಮಾಡಲಿ ನಾನು ಎನಗೆ ಇದು ದಿನವಲ್ಲ,
ಮೀನಿಗೇ ದೊರೆಯಿತದು ಒಂದು ದಿನದೋಡಾಟ.'
ದೇವ ನೇಮಿಸಿದಲ್ಲದೀ ಬಲೆಯೆಸವನೇತಕೆ ಅಂಬಿಗ?
ಹಣೆಯ ಬರಹವ ಮೀರಿ ಬರುವುದು ಮೀನದೆಂತದು ತೀರಕೆ?

# ತೆಳ್ಳಗಾದ ಸಾಧು

ದೊರೆ ಒಬ್ಬ ಸಾಧುವನ್ನು ಕರೆಸಿದ. ದೊರೆಗೆ ನನ್ನ ಮೇಲೆ ಇರುವ ಮರ್ಯಾದೆ ಹೆಚ್ಚುವುದು ಎಂದು ಸಾಧು ತೆಳ್ಳಗಾಗಲು ಒಂದು ಔಷಧ ತಿಂದ. ಆ ವಸ್ತು ವಿಷವಾಗಿ ಪರಿಣಮಿಸಿತು. ತಿಂದೊಡನೆ ಸಾಧು ಸತ್ತೇಹೋದ.

ಹಣ್ಣಿನಂದದಿ ತುಂಬು ತಿಳಿವವನದೆಂದಿದ್ದೆ,
ಪದರಪದರದ ಮಿದುಳು ಈರುಳ್ಳಿಯಂದದಲಿ.
ಎಂತಹಾ ಸಾಧುಗಳು ಇವರೆಲ್ಲ, ಕಣ್ಣೆಲ್ಲ
ಲೌಕಿಕದ ಕಡೆಗಿಹುದು, ಬೆನ್ನು ಕಾಬಾದ ಕಡೆ.

## ಮೌನ

ಒಬ್ಬ ಶಾಸ್ತ್ರ ಸಾಹಿತ್ಯ ಎಲ್ಲಾ ಓದಿಕೊಂಡಿದ್ದ. ಯಾವಾಗ್ಯೂ ತಿಳಿದವರ ಸಂಗದಲ್ಲಿ ಇರುತಿದ್ದ. ಆದರೆ ಒಂದು ಮಾತು ಆಡ. ತಂದೆ ಮಗನಿಗೆ ಒಮ್ಮೆ ಹೇಳಿದ, 'ಎಲೊ ನಿನಗೆ ತಿಳಿದದ್ದನ್ನು ನೀನು ಏಕೆ ಹೇಳದೆ ಇರುವೆ?' ಅವನು ಹೇಳಿದ: 'ಮಾತನಾಡಬಹುದು, ಆದರೆ ಬರದದ್ದನ್ನೇ ಎಲ್ಲಿ ಕೇಳುತ್ತಾರೊ, ಕೇಳಿ ಹೇಳದೆಹೋದರೆ ಹೇಗೊ ಎಂದು ಭೀತಿ ಯಾಗಿದೆ' ಎಂದು.

ಪಾದರಕ್ಷೆಗೆ ಸೂಫಿ ಮೊಳೆ ಹೊಡೆಯುತಿರುತಿದ್ದ,
ಲಾಳ ಕುದುರೆಗೆ ಹೊಡೆಯೆ ಕೇಳಿದನು ಅವಗೊಬ್ಬ.
ಸುಮ್ಮನಿರೆ ನಿನ್ನ ಕೆಲಸವನಾರು ಶೋಧಿಸರು.
ಪ್ರಕಟಗೊಳಿಸುವೆನೆನಲು ಸಿದ್ಧವಾಗಿರು ನೀನು.

## ಹರಕೆ

ಮುದುಕ ಜಿಪುಣಗೆ ಒಬ್ಬ ಮಗ. ಅವನಿಗೆ ಒಮ್ಮೆ ಅಸ್ವಸ್ಥತೆ ಆಯಿತು. ಸ್ನೇಹಿತರು ಮುದುಕನಿಗೆ ಹೇಳಿದರು. 'ಕುರಾನ್ ಗ್ರಂಥ ಪಾರಾಯಣ ಮಾಡು, ಇಲ್ಲದಿದ್ದರೆ ಒಂದು ಪ್ರಾಣಿಯನ್ನು ಹರಕೆ ಒಪ್ಪಿಸು. ದೇವನು ಆತನನ್ನು ಸ್ವಸ್ಥಗೊಳಿಸುತ್ತಾನೆ.' ಆ ಮುದುಕ ಹೇಳಿದ: 'ಮತಗ್ರಂಥ ಇಗೋ ಕೈಹತ್ತಿರ ಇದೆ, ಪಾರಾಯಣ ಮಾಡು ತ್ತೇನೆ. ಪ್ರಾಣಿಯಾಗಬೇಕು ಎಂದರೆ ಹಿಂಡು ಬಹುದೂರ ಹೋಗಿದೆ.' ಇದನ್ನು ಕೇಳಿ ಒಬ್ಬ ಸಾಧು ನುಡಿದ: 'ನಿಜ ನಿಜ, ಕುರಾನ್ ಎಂದರೆ ನಾಲಗೆಯ ಕೊನೆಯಿಂದ ಹೇಳಿಬಿಡಬಹುದು. ಪ್ರಾಣಿ ಎಂದರೆ, ಹಣ ಕೊಡಬೇಕು, ಜೀವ ಹಿಂಡಬೇಕು, ಎಲ್ಲಾ ಆಗಬೇಕು.'

ಪ್ರಾರ್ಥನೆಯು ಗೈವೆನೆಂಬಾ ಸೋಗು ಬಲು ಮೋಸ.
ಅದರೊಡನೆ ಕೊಡುಗೈಯು ಧಾರಾಳವಿರಬೇಕು.
ಒಂದು ಕಾಸನು ಕೊಡಲು ಕೆಸರಿನೊಳಗಣ ಕತ್ತೆ,
ಅಲ್‌ಹಮ್ದು (ಮಂತ್ರವನು) ಪಠಿಸುವುದು ಸುಲಭವಲ್ಲವೆ ಮತ್ತೆ.

## ಹೇಗಿತ್ತು?

ಆ ಉಪನ್ಯಾಸಕನ ದನಿಯೋ ದನಿ. ಅವನನ್ನು ಕೇಳಿದರೆ ಇಂಪಾಗಿ ಮಾತನಾಡುವೆನೆಂದು ತಿಳಿದಿದ್ದ. ಉಪಯುಕ್ತವಾದದ್ದೊಂದನ್ನೂ ಹೇಳದೆ ಸುಮ್ಮನೇ ಮಾತನ್ನಾಡುತ್ತಿದ್ದ. ಕಾಡುಹಕ್ಕಿಯ ಕಿರುಲೊ, ಪಂಡಿತನ ಇಂಪಾದ ಆ ಕೊರಲೊ! ಅವನ ಅಂತಸ್ತು ನೋಡಿ ಮಂದಿ ಅಸ್ತು ಎನ್ನುತ್ತಿದ್ದರು. ಏನು ಮಾತು ಎಂದು ಒಬ್ಬರೂ ಅವನನ್ನು ನೋಯಿಸರು. ಕಟ್ಟಕಡೆಗೆ ಇನ್ನೊಬ್ಬ ಉಪನ್ಯಾಸಕ ಬಂದ. ಮೊದಲನೆಯವನಿಗೆ ಹೇಳಿದ: 'ಅಣ್ಣಾ, ನಾನು ನಿನ್ನನ್ನು ಕನಸಿನಲ್ಲಿ ಕಂಡೆ. ಅದರಿಂದ ಶುಭವಾಗಲಿ!' ಮೊದಲವನು ಕೇಳಿದ, 'ಹೇಗೆ ನನ್ನನ್ನು ಕನಸಿನಲ್ಲಿ ನೋಡಿದೆ?' ಎಂದು. ಎರಡನೆಯವನು ಹೇಳಿದ: 'ಕನಸಿನಲ್ಲಿ ನಿನ್ನ ದನಿ ಒಳ್ಳೇ ಸುಸ್ವರವಾಗಿತ್ತು. ಆ ರಾಗದ ಸರಾಗಕ್ಕೆ, ಮೃದು ಮಧುರ ನಿನದಕ್ಕೆ ಮಂದಿ ಮನಸೋತು ಆಶ್ಚರ್ಯಪಡುತ್ತಿದ್ದರು.' ಮೊದಲನೆಯವನು ಏನಿದು ಎಂದು ಸ್ವಲ್ಪ ಆಲೋಚನೆ ಮಾಡಿ ಆಮೇಲೆ ಹೇಳಿದ, 'ಎಲೆ ಗೆಳೆಯ, ನೀನು ಕಂಡ ಕನಸು ನಿಜವಾಗಿ ಶುಭ, ನನ್ನ ದೋಷವನ್ನು ನನಗೆ ಬಹು ಸುಲಭವಾಗಿ ತಿಳಿಸಿತು. ನನ್ನ ದನಿ ಅಪಸ್ವರ ಎನ್ನುವುದು ಈಗ ತಿಳಿಯಿತು. ಜನಕ್ಕೆಲ್ಲ ಇದುವರೆಗೆ ನನ್ನಿಂದ ಎಷ್ಟು ಬೇಸರವಾಯಿತೋ ಏನೊ? ಎನ್ನಾಣೆ ಇನ್ನುಮೇಲೆ ಅರಚುತ್ತ ಮಾತಾಡೆ. ಮೆಲುನುಡಿಯನ್ನು ಅಭ್ಯಾಸ ಮಾಡುತ್ತೇನೆ.'

ಏನು ಸ್ನೇಹಿತರಯ್ಯ ದೋಷಗಳನೊಪ್ಪೆಂದು ಹೇಳುವರು,<br>
ತಪ್ಪಿರಲು ಸರಿಯೆಂದು ಕುಂದಿರಲು ಸೊಗಸೆಂದು ಹೇಳುವರು?<br>
ಮುಳ್ಳುಗಳನೆಲ್ಲವನು ಗುಲ್ ಗುಲಾಬಿಗಳೆಂದು ಹೇಳುವರು;<br>
ದೋಷವನು ದೋಷವೆಂದಾಡುವಾ ಪ್ರತಿಸ್ಪರ್ಧಿ ತಾನೆಲ್ಲಿ?

## ಚೇಳಿನ ಪ್ರಶ್ನೆ

ಚೇಳನ್ನು ಕೇಳಿದೆ: 'ಚಳಿಯ ಕಾಲದಲ್ಲಿ ಏಕೆ ನೀನು ಹೊರಕ್ಕೆ ಬರುವುದಿಲ್ಲ?' ಎಂದು. ಅದು ಹೇಳಿತು: 'ಬಿಸಿಲು ಕಾಲದಲ್ಲಿ ನಾನು ಹೊರಕ್ಕೆ ಬಂದು ಮಾಡಿದ ಉಪಕಾರವೇನು, ಚಳಿಯ ಕಾಲದಲ್ಲಿ ಈ ಪ್ರಾಣಿ ಕಾಣಿಸಲಿಲ್ಲವಲ್ಲಾ ಎಂದು ಬಯಸುವಷ್ಟು?' ಎಂದು.

# ಮುವಜ್ಜೀನ

(ಪ್ರಾರ್ಥನೆಗೆ ಕರೆಯುವವನು)

ಬತೋವಾ ನಗರದ ಪ್ರಾರ್ಥನಾಲಯದಲ್ಲಿ ಜನಗಳನ್ನು ತನಗೆ ತಾನೇ ಮುಂದೆ ಬಂದು ಒಬ್ಬ ಪ್ರಾರ್ಥನೆಗೆ ಕರೆಯುತ್ತಿದ್ದ. ಅವನ ಮಂತ್ರದ ಅಬ್ಬರಕ್ಕೆ ಬರುವ ಜನ ಹಿಂದಕ್ಕೆ ಹೋಗುತ್ತಿದ್ದರು. ಆ ಪ್ರಾರ್ಥನಾಲಯದ ಮುಖ್ಯಸ್ಥ ಒಳ್ಳೆಯವನು, ಯಾರನ್ನೂ ನೋಯಿಸಲಾರ. ಒಂದು ದಿನ ಮುವಜ್ಜೀನನಿಗೆ ಹೇಳಿದ: 'ಅಣ್ಣಯ್ಯ, ಈ ಮಂದಿರದಲ್ಲಿ ಹಲವು ಮುವಜ್ಜೀನರು ಬಹುಕಾಲದಿಂದ ಇದ್ದಾರೆ. ಅವರಿಗೆಲ್ಲ ತಿಂಗಳಿಗೆ ಐದು ದೀನಾರು (ಹಣ) ಕೊಡುತ್ತಿದ್ದೇನೆ. ನಿನಗೆ ಇಗೋ ಹತ್ತು ದೀನಾರು ಕೊಡುತ್ತೇನೆ. ಇದನ್ನು ತೆಗೆದುಕೊಂಡು ನೀನು ಇನ್ನೆಲ್ಲಿಗಾದರೂ ಹೋಗು.' ಅವನು ಹಾಗೆಯೇ ಹೊರಟುಹೋದ. ಕೆಲವು ದಿನಗಳ ಮೇಲೆ ಮತ್ತೆ ಹಿಂದಕ್ಕೆ ಬಂದು ಮುಖ್ಯನಿಗೆ ಹೇಳುತ್ತಾನೆ, 'ಹತ್ತು ದೀನಾರುಗಳನ್ನು ಕೊಟ್ಟು ನೀವು ಯಾವ ವೇಳೆಯಲ್ಲಿ ನನ್ನನ್ನು ಇಲ್ಲಿಂದ ಕಳುಹಿದಿರೊ ಏನೊ? ಅಲ್ಲಿ ಹೋದ ಕಡೆ ಇಪ್ಪತ್ತು ದೀನಾರುಗಳನ್ನು ಕೈಲಿಟ್ಟು ಮುಂದಕ್ಕೆ ಹೋಗು ಎಂದು ಹೇಳಿದರು. ತೆಗೆದುಕೊಳ್ಳುವುದಿಲ್ಲ ಎಂದೆ.' ಮುಖ್ಯಸ್ಥ ನಕ್ಕು ಹೇಳಿದ: 'ತೆಗೆದುಕೊಳ್ಳದ್ದೇ ಒಳ್ಳೆಯದಾಯಿತು. ಒಪ್ಪಿದ್ದರೆ ಆ ಜನ ಐವತ್ತನ್ನಾದರೂ ಕೊಟ್ಟು ಮುಂದಕ್ಕೆ ಕಳುಹಿಸುತ್ತಿದ್ದರು.'

ಕೆತ್ತುತಿದೆ ಎನ್ನೀಗ ನಿನ್ನ ಈ ದನಿಯಣ್ಣ
ಕಬ್ಬಿಣದ ಅಲುಗು ಬಂಡೆಯ ಕೆತ್ತುವಂದದಲಿ.

# ಮದ್ದು

ಒಬ್ಬ ಶಿಷ್ಯ ಒಬ್ಬ ಹಿರಿಯನಿಗೆ ದೂರು ಹೇಳಿದ: 'ಜನ ನನ್ನ ಹತ್ತಿರ ಬಂದು ಬಹಳ ಕಿರುಕುಳ ಕೊಡುತ್ತಾರೆ. ಅದಕ್ಕೇನು ಮಾಡಲಿ?' ಹಿರಿಯ ಹೇಳಿದ: 'ಅಯ್ಯ, ಬಡವರು ಬಂದರೆ ಹಣ ಸಾಲ ಕೊಡು. ಹಣಗಾರರು ಬಂದರೆ ಸಾಲ ಕೇಳು. ಮತ್ತೆಂದಿಗೂ ಅವರು ನಿನ್ನ ಹತ್ತಿರ ಬರುವುದಿಲ್ಲ.'

## ಕುರಾನ್ ಪಠನ

ಒಬ್ಬ ಒರಟು ದನಿಯಲ್ಲಿ ಒರಲುತ್ತ ಕುರಾನನ್ನು ಓದುತ್ತಿದ್ದ. ಒಬ್ಬ ಸಭ್ಯ ಅವನ ಬಳಿಗೆ ಬಂದು 'ನಿನಗೆ ತಿಂಗಳಿಗೆ ಏನು ವೇತನ ಕೊಡುತ್ತಾರೆ ಹೇಳು' ಎಂದು ಕೇಳಿದ. 'ವೇತನ! ಅಂತಹುದೇನೂ ಇಲ್ಲ' ಎಂದು ಅವನು ಹೇಳಿದ. ಆ ಮನುಷ್ಯ ಕೇಳಿದ, 'ವೇತನವಿಲ್ಲ ದಿದ್ದರೆ ಈ ಶ್ರಮವೇಕೆ?' ಎಂದು. ಓದುವವನು ಹೇಳಿದ, 'ದೇವನಿಗೆ ಪ್ರೀತಿಯಾಗಲೆಂದು ಓದುತ್ತಿದ್ದೇನೆ' ಎಂದು. ಆ ಮನುಷ್ಯ ಹೇಳಿದ: 'ದೇವನಿಗಾಗಿ ಆದರೆ, ನಮ್ಮಪ್ಪಾ, ಇದನ್ನು ಹೀಗೆ ಓದಬೇಡ.'

> ಹೊತ್ತಗೆಯ ನೀ ತೆರದೊಳೊರಲಿದರೆ ಕೇಳಣ್ಣ,
> ಇಸ್ಲಾಮು ಖ್ಯಾತಿಗಿದು ಮಸಿಯ ತಿದ್ದುವ ರೀತಿ.

## ಯಹೂದಿಯ ನೆರೆ

ಒಂದು ಮನೆ ಕೊಳ್ಳಬೇಕೆಂದು ಆಲೋಚನೆ ಮಾಡಿ ನಾನು ಸಂಶಯ ಪಡುತ್ತಾ ಇದ್ದೆ. ಆಗ ಒಬ್ಬ ಯಹೂದಿ ಕಣ್ಣಿಗೆ ಬಿದ್ದ. ಹೇಳಿದ, 'ನಾನು ಈ ಬೀದಿಯಲ್ಲಿ ಬಹುಕಾಲದಿಂದ ಇದ್ದೇನೆ. ನನ್ನ ಮಾತನ್ನು ಕೇಳು. ಈ ಮನೆ ಕೊಂಡುಕೊ, ಹೆದರಬೇಡ. ಇದರೊಳಗೆ ಏನೂ ದೋಷವಿಲ್ಲ.' ಹೇಳಿದೆ, 'ಎಲ್ಲಾ ಸರಿಹೋಯಿತು ಒಂದು ದೋಷ ಮಾತ್ರ ಇದೆ. ನಿನ್ನ ನೆರೆ.'

> ನೆರೆಯಾತ ನೀನಿರಲು ಹತ್ತು ಹಣ ವಿದಕೆಂತು
> ಕೊಡುವೆನೆಂಬಾ ಬೆದರು ಮನವ ಬಾಧಿಸುತಿಹುದು.
> ಅಂಕುರಿಸುತಿಹುದಾಶೆ ನೀನು ಹೋದಾ ಮೇಲೆ
> ಬೆಲೆಯು ಸಾವಿರಕೇರಿ ನಿಲ್ಲುವುದೊ ಎಂತೆಂದು.'

## ಬಾಣ—ಬಿರಸು

ಒಬ್ಬ ಹಿಂದೂ ದೇಶದವನು ಬಾಣ ಬಿರಸು ಹೊತ್ತಿಸುವ ಆಟವನ್ನು ಕಲಿಸುತ್ತಿದ್ದ. ಒಬ್ಬ ತತ್ವಜ್ಞ ಆ ಕಡೆ ಹೋಗುತ್ತ ಅವನಿಗೆ ಹೇಳಿದ: 'ಅಣ್ಣಾ, ಈ ಆಟ ನಿನಗಲ್ಲ, ನಿನ್ನ ಮನೆಗೆ ಹುಲ್ಲು ಹೊಚ್ಚಿದೆ ನೋಡು.'

## ಕಾಗೆ—ಗಿಳಿ

ಒಂದು ಕಾಗೆ, ಒಂದು ಗಿಳಿ, ಎರಡನ್ನೂ ಒಂದೇ ಗೂಡಿನಲ್ಲಿ ಕೂಡಿದರು. ಕಾಗೆಯನ್ನು ನೋಡಿ ಗಿಳಿಗೆ ಅಸಹ್ಯವಾಯಿತು. 'ಏನಿದು ವಿಕಾರ!' ಎಂದಿತು.

'ಬೆಳಗಿನಲಿ ನಿನ್ನೆದುರು ಹಾಯ್ದನಾದೊಡೆ ಅವಗೆ
ಕವಿಯುವುದು ಕತ್ತಲೆಯು ಹಗಲಿನಾ ಬೆಳಕಿನಲಿ.
ನಿನ್ನ ಜೊತೆಗಿರಬೇಕು ನಿನ್ನಂದದಿನ್ನೊಬ್ಬ.
ಲೋಕವನೆ ಹುಡುಕಿದರು ಸಿಕ್ಕುವನು ಅವನೆಲ್ಲಿ?'

ಏನಾಶ್ಚರ್ಯವೋ, ಕಾಗೆಗೂ ಗಿಳಿಯನ್ನು ನೋಡಿ ಬೇಸರವಾಯಿತು. ತನ್ನ ದುರದೃಷ್ಟಕ್ಕೆ ಅದು ಅತ್ತು ಗೋಳಾಡಿತು. ಕಾಲ ಕೆಟ್ಟಿತೆಂದು ಒರಲಿಕೊಂಡಿತು. ಕಿಚ್ಚಿನಿಂದ ಕೈ ಹಿಸುಕಿಕೊಂಡಿತು. 'ಏನು ವಿಧಿಯಪ್ಪಾ, ನರಕವಾಯಿತಲ್ಲಪ್ಪಾ' ಎಂದು ನಿಟ್ಟುಸಿರು ಬಿಟ್ಟಿತು. 'ಗೋಡೆಗಳ ಮೇಲೆ ಜೊತೆ ಕಾಗೆಗಳ ಗುಂಪಿನಲ್ಲಿ ಎಷ್ಟು ವೈಭವದಿಂದ ಇದ್ದೆ, ಈ ದುಷ್ಟ ಸಹವಾಸ ಸಿಕ್ಕಿದ್ದೇನು?' ಎಂದುಕೊಂಡಿತು.

'ಒಳ್ಳೆಯವನಾದನಿಗೆ ಬೇಕೆ ಹೆಚ್ಚಿನ ಶಿಕ್ಷೆ,
ಸಾಲ್ಲದೇ ಕೂಡುವುದು ಕೆಡುಕಿಯಾದನ ಜೊತೆಗೆ?

'ಈ ಬುದ್ಧಿಯಿಲ್ಲದ ಗರ್ವಿ, ಕಾರ್ಯಕ್ಕೆ ಬರದ ಹುಚ್ಚುಹರಟೆಯವನೊಡನೆ ಈ ಹಿಂಸೆಯ ಮನೆಯಲ್ಲಿ ನನ್ನನ್ನು ಏಕೆ ಬಿಗಿದಿದ್ದಾರೆ? ಏನು ಪಾಪ ಮಾಡಿದೆ?'

'ನಿನ್ನ ಚಿತ್ರವದೊಂದು ಗೋಡೆಯಲಿ ಬರೆದಿರಲು
ಸುಳಿಯರದರೆಡೆ ಕೇಳು ಮತಿವಂತರಾದವರು.
ಸಗ್ಗದಲಿ ನಿನಗೊಂದು ಸ್ಥಳವು ಸಿಕ್ಕಲು ಕೇಳು.
ನರಕವೇ ಮೇಲೆಂದು ಹೋಗುವರು ಖಿಕ್ಕವರು.'

ಎಂದು ಗಿಳಿಯನ್ನು ಮೂದಲಿಸಿತು.

ಈ ಕತೆ ಲೋಕವ್ಯವಹಾರಕ್ಕೆ ಹೊಂದುವುದು. ಪಂಡಿತರು ಪಾಂಡಿತ್ಯವಿಲ್ಲದವರನ್ನು ಕಡೆಗಣ್ಣ ನೋಟದಿಂದ ನೋಡುವರು. ಅವರು ಇವರನ್ನು ಕಂಡೊಡನೆ ನೂರುಮಡಿ ಹೆಚ್ಚಾಗಿ ಹಳಿಯುವರು.

ಊರ ತಿರುಗುವ ಹಾಡುಗಾರರ ನಡುವೆ ಸಿಕ್ಕಿದನೊಂದು ಗುಂಪಿನ ಸಾಧುವು,
ಅವರಳೊಬ್ಬನು ಬಲ್ಕ ಪ್ರಾಂತದ ಗೆಳೆಯನಿದ್ದನು, ಸಾಧುವನು ಕುರಿತೆಂದನು :
‘ ನಮ್ಮ ಈ ಸಹವಾಸ ಬೇಸರವಿರಲಿ, ತೋರಿಸಬೇಡ ಮೊಗದಲಿ ಹುಳಿಯನು.
ನಿನ್ನ ಈ ಒಡನಾಟ ಕಾಣೆಯ ನಮಗೆ ಬೇಸರವಾಗಿ ತೋರುತಲಿರುವುದು.
ನಮ್ಮ ಗುಂಪಿದು ವಿವಿಧವರ್ಣದ ಗಂಧ ಪರಿಮಳ ಭರಿತ ಕುಸುಮದ ರಾಶಿಯು
ನಡುವೆ ಒಣಗಿದ ತೊಟ್ಟಿನಂದದಿ ಕೂಡಿಕೊಂಡಿಹೆ ನಿನ್ನ ಬಣ್ಣವನರಿಯೆಯಾ?
ಅರಳು ಹೂಗಳನುದುರಿಸುವ ಬಿರುಗಾಳಿಯಲ್ಲವೆ ಶೀತಕಾಲದ ಕೊರೆತವು,
ಸೋನೆಯಂದದಿ ಸುರಿವ ತಣ್ಣನೆ ಹಿಮವು ಮೇಣಾ ಹೆತ್ತ ಮಂಜಿನಗಡ್ಡೆಯು.’

## ಕಣ್ಣಿನ ನೋವು

ಒಬ್ಬನಿಗೆ ಕಣ್ಣಿನಲ್ಲಿ ನೋವಿತ್ತು. ಕುದುರೆ ವೈದ್ಯನ ಬಳಿಗೆ ಹೋಗಿ ಔಷಧ ಮಾಡು ಎಂದು ಕೇಳಿದನು. ಕುದುರೆ ವೈದ್ಯ ಆಗ ನಾಲ್ಕುಕಾಲಿನ ಪ್ರಾಣಿಗಳ ಕಣ್ಣಿಗೆ ಮಾಡುವ ಔಷಧ ಮಾಡಿದನು. ಇದ್ದ ಕಣ್ಣು ಇಂಗಿ ಕುರುಡಾಯಿತು. ಆ ಮನುಷ್ಯ ನ್ಯಾಯಾಧಿಕಾರಿಯ ಬಳಿಗೆ ದೂರು ತೆಗೆದುಕೊಂಡುಹೋದನು. ಅಧಿಕಾರಿ ನ್ಯಾಯ ಹೇಳಿದ: ‘ ಈ ಸಂದರ್ಭಕ್ಕೆ ಮದ್ದು ಇಲ್ಲ. ಈ ಮನುಷ್ಯ ಕತ್ತೆಯಂತಹ ಮನುಷ್ಯ. ಅದಕ್ಕೇ ಕುದುರೆ ವೈದ್ಯನ ಬಳಿಗೆ ಹೋಗಿದ್ದಾನೆ.’

ಮುಖ್ಯ, ಗೌರವದ ಕಾರ್ಯಕ್ಕೆ ಅನುಭವವಿಲ್ಲದವನನ್ನು ಕಳುಹಿಸಿದರೆ ಕಳುಹಿಸಿದವನ ಕಾರ್ಯಕ್ಕೂ ಆಭಾಸ, ಮೇಲೆ ಅವನು ತಿಳಿವಿಲ್ಲದವನು ಎಂಬ ಅಪವಾದ.

ಅರಿತು ನಡೆಯುವ ಮನುಜ, ತನ್ನ ಕಾರ್ಯವ, ಕೇಳು
ವಹಿಸನವನೆಂದಿಗೂ ಕೈಲಾಗದಾತನಿಗೆ.
ಚಾಪೆಯನು ಹೆಣೆಯುವವ ನೆಯ್ಗೆಯವನೇ ಅಹುದು
ರೇಶಿಮೆಯ ಕೆಲಸವನು ಮಾಡಬಲ್ಲನೆ ಅವನು ?

# ಲೈಲ—ಮಜ್ನೂನು

ಅರೇಬಿಯದ ದೊರೆಗೆ ಒಂದು ದಿನ ಲೈಲ ಮಜ್ನೂನರ ಸಂಗತಿಯನ್ನು ಹೇಳಿದರು. ಮಜ್ನೂನು ಹುಚ್ಚನಾಗಿದ್ದಾನೆ, ಅವನ ವಿದ್ಯ ಬುದ್ಧಿಗಳು ನಾಶವಾಗಿವೆ, ಅವನು ಉನ್ಮಾದದಿಂದ ಮರಳುಕಾಡಿನಲ್ಲಿ ಅಲೆಯುತ್ತಿದ್ದಾನೆ, ಎಂದು ತಿಳಿಸಿದರು. ಅಪ್ಪಣೆ ಆಯಿತು, ಅವನನ್ನು ಅರಸನ ಬಳಿಗೆ ಹಿಡಿದುತಂದರು. ದೊರೆ 'ನಿನಗೇನು ಬೇಸರವಾಗಿದೆ, ಮೃಗಗಳನ್ನು ಅನುಸರಿಸಿಕೊಂಡು ಹೀಗೇಕೆ ನಡೆದಿರುವೆ?' ಎಂದು ಅವನನ್ನು ಕೇಳಿದನು. ಮಜ್ನೂನು ಲೈಲಾಳನ್ನು ನೆನೆದು ಕಣ್ಣೀರು ಸುರಿಸಿದ.

'ಎನ್ನ ಹೃದಯುವ ಸೆಳೆದು ಹಿಡಿದುಕೊಂಡಿಹ ಚೆಲುವೆ,
ಒಮ್ಮೆ ನೋಡಲಿ ನಿನ್ನ, ಅವರೆನ್ನ ದೂಷಿಸರು.
ನಿನ್ನ ನೋಡುತಲವರು ಹಣ್ಣು ಹೆಚ್ಚಲು ಹೋಗಿ
ತಮ್ಮ ಕೈಯನು ತಾವೆ ಹೆಚ್ಚಿಕೊಳ್ಳುವರೇನೊ!

ಅದು ಆಗ ಸಾಕ್ಷಿ ತಾನಾಗುವುದು ಸತ್ಯಕ್ಕೆ.' ಎಂದು ಹೇಳಿಕೊಂಡ.

ದೊರೆ ಅಂದುಕೊಂಡ, ಲೈಲಾಳನ್ನು ಕರೆಸಿನೋಡಿದರೆ ಅವಳ ರೂಪ ಮಜ್ನೂನನ್ನು ಹೇಗೆ ಉನ್ಮಾದಗೊಳಿಸಿತು ಎಂಬುದು ತಾನೆ ತಿಳಿಯುತ್ತದೆ ಎಂದು. ಅಪ್ಪಣೆ ಆಯಿತು, ಪಾಳ್ಯಗಳನ್ನೆಲ್ಲ ಹುಡುಕಿದರು. ಕಡೆಗೆ ಅವಳನ್ನು ಕಂಡು ಅರಸನ ಮುಂದೆ ಕರೆದುತಂದು ನಿಲ್ಲಿಸಿದರು. ದೊರೆ ನೋಡಿದ. ಅವನಿಗೆ ಆಶ್ಚರ್ಯವಾಯಿತು. ಅವನ ರಾಣೀವಾಸದಲ್ಲೆಲ್ಲಾ ಏನೇನು ರೂಪವಿಲ್ಲದ ತೊತ್ತು ಎನ್ನಿಸಿಕೊಂಡವಳು ಕೂಡ ಚೆಲುವಿನಲ್ಲಿ ಶೃಂಗಾರದಲ್ಲಿ ಲೈಲಳಿಗಿಂತಲೂ ಚೆನ್ನಾಗಿದ್ದಳು. ಏನು ಲೈಲಾ ಇವಳು ಎಂದುಕೊಂಡ ದೊರೆ. ದೊರೆಯ ಆಶ್ಚರ್ಯವನ್ನು ಮಜ್ನೂನು ಗ್ರಹಿಸಿದ. 'ಓ ದೊರೆಯೆ, ಲೈಲಾಳನ್ನು ತಿಳಿಯಬೇಕಾದರೆ ಮಜ್ನೂನ ಕಣ್ಣಿನಿಂದಲೇ ನೋಡಬೇಕು' ಎಂದ.

ನಿನಗೆ ತಿಳಿವುದು ಎಂತು ಎನ್ನ ಮನ ಕದಲಿಹುದು
ಎನ್ನವೋಲಿರುವನಿಗೆ ಎನ್ನ ಕತೆ ತಿಳಿದೀತು.
ಗಾಯವಿದ್ದವಗಲ್ಲದಾರಿಗದು ನೋವರಿವು?
ನೋವನರುಹಲುಬೇಕು ನೋವುಳ್ಳ ಗೆಳೆಯರಿಗೆ.
ನಿನ್ನ ಸ್ಥಿತಿ ಸ್ವಲ್ಪವೂ ಹೋಲದಿರಲೆನ್ನದನು
ನನ್ನ ಕತೆ ಎಷ್ಟು ಹೇಳಲು ನಿನಗೆ ಕಟ್ಟು ಕತೆ.

## ಸಮಾಧಿಯ ಮೇಲೆ

ಒಬ್ಬ ಧನಿಕರ ಮಗ ತನ್ನ ತಂದೆಯ ಸಮಾಧಿಯ ಹತ್ತಿರ ಕುಳಿತಿದ್ದ. ಒಬ್ಬ ಬಡವರ ಹುಡುಗನೂ ಹಾಗೆಯೇ ತನ್ನ ತಂದೆಯ ಗೋರಿಯ ಬಳಿ ಕುಳಿತಿದ್ದ. ಹಣವಂತರ ಹುಡುಗ ಬಡ ಹುಡುನಿಗೆ ಹೇಳಿದ: 'ನೋಡು. ನನ್ನ ತಂದೆಯ ಗೋರಿಗೆ ಕಲ್ಲು ಹಾಸಿದ್ದಾರೆ. ಕಲ್ಲಿನ ಮೇಲೆ ಚಿನ್ನದ ಅಕ್ಷರ ಕೆತ್ತಿದ್ದಾರೆ. ನಿನ್ನ ತಂದೆ ಆದರೊ ಇಟ್ಟಿಗೆಯ ಗೋರಿಯಲ್ಲಿ ಮಲಗಿದ್ದಾನೆ.' ಬಡವರ ಹುಡುಗ ಹೇಳಿದ: 'ಅಯ್ಯ ನಿನಗೆ ಶಾಂತಿ ಇರಲಿ! ನಿನ್ನ ತಂದೆ ಇಷ್ಟು ಭಾರ ಹೊತ್ತು ಹೊರಳಿ ಏಳುವುದಕ್ಕೆ ಮೊದಲೆ ನನ್ನ ತಂದೆ ಸ್ವರ್ಗಕ್ಕೆ ಏರಿಹೋಗಿರುತ್ತಾನೆ.'

ಹಗುರವಾಗಿಹ ಹೊರೆಯ ಹೊರೆಸಿರುವ ಆ ಕತ್ತೆ
ವೇಗದಲಿ ಮುಂದರಿಯುವುದು ತಾನು ಪಯಣದಲಿ.
ಬಡತನದಿ ನರಳುತಿಹ ದರ್ವೇಷ ಕೇಳಯ್ಯ
ಹಗುರವಾಗಿಯೆ ನಡೆವ ಸಾವಿನಾ ಬಾಗಿಲಲಿ.
ಸಂಪತ್ತು ಸಮೃದ್ಧಿ ಇರುವಾತ ಕೇಳಯ್ಯ
ಸಾಯಲಿವುಗಳ ನಡುವೆ ಕಷ್ಟವಹುದಾತನಿಗೆ.
ಬಿಡುಗಡೆಯ ಹೊಂದಿದ ಗುಲಾಮನಿಗೆ ಇರುವ ಸುಖ
ಈಗತಾನೇ ಸೆರೆಗೆ ಬಿದ್ದ ದೊರೆಗಿರದಯ್ಯ.

## ತಪ್ಪೊಪ್ಪು

ಯಾರನ್ನು ಕೇಳಿದರೂ ತನ್ನ ಬುದ್ಧಿ ನಿರ್ದೋಷವೆನ್ನುವನು; ತನ್ನ ಮಗು ಸಕಲ ಚೆಲುವಿನ ಸಾರ ಎನ್ನುವನು.

ಯಹುದಿಯೂ ಮುಸ್ಲಿಮನು ವಾದಮಾಡಿದರೊಮ್ಮೆ,
ಅವರ ಮಾತಿನ ವಿಷಯ ತಿಳಿದು ನಕ್ಕೆನು ನಾನು.
ಹೇಳಿದನು ಮುಸ್ಲಿಮನು: 'ದೋಷವಿರೆ ಪತ್ರದಲಿ,
ಇದರಾಣೆ, ಸಾಯುವೆನು ಯಹುದಿಯಾಗಿಯೆ ನಾನು.'
ಹೇಳಿದನು ಯಹುದಿಯನು: 'ಸುಳ್ಳಿರಲು ನನ್ನ ಕಡೆ,
ಎನ್ನಹೊತ್ತಗೆಯಾಣೆ, ಮುಸ್ಲಿಮನೆ ಆಗುವೆನು.'
ಲೋಕವನು ತ್ಯಜಿಸಿದೊಡೆ ಮತಿಯೆಂಬ ಆ ವಸ್ತು,
ನುಡಿಯುವರು ಇರರಯ್ಯ ತಿಳಿವಿಲ್ಲವೆಮಗೆಂದು.

## ತಂದೆ—ಮಗ

ದಿಯಾರ್‌ಬಕರ್ ಪ್ರಾಂತದಲ್ಲಿ ನಾನೊಬ್ಬ ವೃದ್ಧನ ಮನೆಯೊಳಗೆ ಇಳಿದಿದ್ದೆ. ಅವನಿಗೆ ಅಪಾರ ಭಾಗ್ಯ. ಒಬ್ಬ ಮಗ ಇದ್ದ. ಒಂದು ದಿನ ಆ ಮುದುಕ ಹೇಳಿದ: 'ಈ ಮಗನ ಹೊರತು ನನಗೆ ಮತ್ತೊಬ್ಬನಿಲ್ಲ. ಈ ಪ್ರಾಂತದಲ್ಲಿ ಬಹು ಪುರಾತನವಾದ ಮರವೊಂದುಂಟು. ಎಲ್ಲ ಜನ ಹರಕೆ ಮಾಡಿಕೊಂಡು ಅದರ ನೆರಳಿಗೆ ಹೋಗಿಬರುತ್ತಾರೆ. ನಾನೂ ಇಂತಹ ಒಬ್ಬ ಮಗನನ್ನು ಕೊಡು ಎಂದು ಆ ಗಿಡದ ಹತ್ತಿರ ಹೋಗಿ ದೇವನಿಗೆ ಮೊರೆಯಿಟ್ಟಿದ್ದೇನೆ.' ಯುವಕನೂ ತನ್ನ ಸ್ನೇಹಿತರಲ್ಲಿ ಹೇಳು ತ್ತಿದ್ದ ಎಂದು ಕೇಳಿದೆ: 'ಎಲ್ಲಿದೆ ಆ ಮರ? ಹೋಗಿ ಪ್ರಾರ್ಥಿಸುವೆನಲ್ಲ, ಈ ತಂದೆ ಬೇಗ ಸಾಯಲಿ ಎಂದು.' ತಂದೆ ಸಂತೋಷಿಸುವನು ಬುದ್ಧಿ ವಂತ ನನ್ನ ಮಗ ಎಂದು, ಮಗ ಅಳುವನು ಎಂತಹ ಮುದಿಗೂಬೆ ಇವನು ಎಂದು.

ವರ್ಷಗಳು ಉರುಳುರುಳಿ ಹಾದು ಹೋಗುತಲಿಹವು
ನಿನ್ನ ತಂದೆಯ ಗೋರಿ ನೀ ಹೋಗಿ ನೋಡಿಲ್ಲ,
ನಿನ್ನ ತಂದೆಯ ನೆನೆದು ಒಮ್ಮೆ ಪೂಜಿಸಲಿಲ್ಲ,
ನಿನ್ನ ಮಗ ನಿನಗೆಂತು ಶ್ರದ್ಧೆಯನು ತೋರುವನು?

## ಹಿರಿಯ ಕಂಡ ಕನಸು

ಒಬ್ಬ ಹಿರಿಯ ಒಂದು ಕನಸು ಕಂಡ, ದೊರೆ ಸ್ವರ್ಗದಲ್ಲಿದ್ದಹಾಗೆ, ಸಾಧು ನರಕದಲ್ಲಿದ್ದಹಾಗೆ. ಆಮೇಲೆ ಕೇಳಿದ 'ದೊರೆಗೆ ಈ ಸುಖವೇನು, ಸಾಧುವಿಗೆ ಈ ಸಂಕಟ ಏಕೆ?' ಲೋಕದ ತಿಳಿವಳಿಕೆಗೆ ಈ ಸ್ಥಿತಿ ವ್ಯತಿರಿಕ್ತ ವಾಗಿತ್ತು. ಆಗೊಂದು ವಾಣಿ ಕೇಳಿಸಿತು. 'ಸಾಧುಗಳ ಸೇವೆ ಮಾಡಿ ದೊರೆ ಸ್ವರ್ಗ ಪಡೆದಿದ್ದಾನೆ; ದೊರೆಗಳ ಸಹವಾಸ ಮಾಡಿ ಸಾಧು ನರಕಕ್ಕೆ ಬಿದ್ದಿದ್ದಾನೆ.'

ಆ ಬಟ್ಟೆ ಈತೆರದ ಜಪಸರಗಳಿಂದೇನು,
ಸಲ್ಲದಾ ಕಾರ್ಯಗಳ ಮಾಡದವನೇ ಸಾಧು.
ದರ್ವೇಷನಾಗನವ ಆ ಕುಲಾವಿಯ ಧರಿಸಿ,
ಇರಲಿ ಟಾರ್ಟರ ಟೋಪಿ, ಬೇಕು ಹೃದಯದ ಶುದ್ಧಿ.

## ದೊರೆಯ ಮಾತು

ಒಮ್ಮೆ ಬೇಟೆಯಾಡುವುದಕ್ಕೆ ಹೋದ ಸ್ಥಳದಲ್ಲಿ ನೌಷೇರವಾನ್ ದೊರೆಗೆಂದು ಅಡಿಗೆ ಮಾಡಿದರು. ಉಪ್ಪು ಸಾಲದೆ ಬಂತು. ಹತ್ತಿರದ ಹಳ್ಳಿಗೆ ಹೋಗಿ ತರುವುದೆಂದು ಒಬ್ಬ ಆಳನ್ನು ಕಳುಹಿಸಿದರು. ದೊರೆ ಅವನನ್ನು ಹತ್ತಿರ ಕರೆದು ಹೇಳಿದ: 'ಅದಕ್ಕೆ ಸರಿಯಾದ ಬೆಲೆ ಕೊಟ್ಟು ತರಬೇಕು. ಎಂದಿಗೂ ಜನಗಳನ್ನು ಹೆದರಿಸಿ ಸುಮ್ಮನೇ ತರಲಾಗದು. ಹೆದರಿಸಿದರೆ ಆ ಜನ ಗ್ರಾಮವನ್ನೆ ತ್ಯಜಿಸಿಹೋಗಬಹುದು. ಕೆಟ್ಟ ನಡತೆಗೆ ಅವಕಾಶ ಕೊಟ್ಟಹಾಗಾಗುವುದು. ಎಚ್ಚರಿಕೆ.' ಪರಿವಾರದವರು 'ಒಂದು ಹಿಡಿ ಉಪ್ಪು ತಂದರೆ ಏನು ಪ್ರಮಾದ' ಎಂದು ಕೇಳಿದರು. ದೊರೆ ಹೇಳಿದ: 'ಮೊದಲಿನಲ್ಲಿ ಸ್ವಲ್ಪವೇ ಸ್ವಲ್ಪ ಹಿಂಸೆಯ ಬಿತ್ತನೆ ಆಯಿತು. ಬಂದುಬಂದ ವರು ಅದನ್ನು ಹೆಚ್ಚಿಸಿದರು. ಅದಕ್ಕೇ ಅದು ಈಗ ಆವರಿಸಿ ನಿಂತಿರುವುದು.'

ಪ್ರಜೆಯ ತೋಟದಲಿ ದೊರೆ ತಿನುವುದೊಂದೇ ಹಣ್ಣು,
ಗಿಡಗಿಡವನೇ ಕೀಳುವರು ದೊರೆಯ ಸೇವಕರು.
ಐದು ಮೊಟ್ಟೆಯ ಕೊಳ್ಳೆ ದೊರೆಯು ಆಗಲಿ ಎಂಬ,
ಹೊಡೆಯುವರು ಸೈನಿಕರು ಪಕ್ಕಿಗಳು ಸಾವಿರವ.

## ಲೇಸು

ಇನ್ನೂ ನನಗೆ ನೆನಪಿದೆ. ಆಗ ನನಗೆ ಕಿರಿವಯಸ್ಸು. ಭಕ್ತಿಯಿಂದ ಆಚಾರಗಳನ್ನು ಪಾಲಿಸುತ್ತಿದ್ದೆ. ಒಂದು ರಾತ್ರೆ. ತಂದೆಯ ಸಂಗಡ ಇದ್ದೆ — ಪರಮಪುರುಷನ ಕರುಣೆ ಆತನ ಮೇಲೆ ಇರಲಿ! — ಆ ರಾತ್ರೆ ಯೆಲ್ಲಾ ಕಣ್ಣುಮುಚ್ಚದೆ ಕುರಾನನ್ನು ಓದುತ್ತಿದ್ದೆ. ಹಲಕೆಲವರು ಅಲ್ಲೇ ಮಲಗಿ ನಿದ್ರೆ ಮಾಡುತ್ತಿದ್ದರು. ನಾನು ತಂದೆಯೊಡನೆ ಹೇಳಿದೆ: 'ನೋಡಯ್ಯ, ಇವರೊಳಗೆ ತಲೆಯೆತ್ತಿ ಪ್ರಾರ್ಥನೆ ಮಾಡುವವನು ಒಬ್ಬನಾದರು ಇಲ್ಲ. ಅವರೆಲ್ಲ ಸತ್ತಂತೆ ಮಲಗಿದ್ದಾರೆ.' ತಂದೆ ಒಡನೆಯೇ ಹೇಳಿದರು: 'ಎನ್ನ ಜೀವದ ಜೀವ, ಇತರರ ತಪ್ಪನ್ನು ನೋಡಿ ಅವರನ್ನು ಹಳಿಯುವುದಕ್ಕೆ ಕಲಿಯುವದಕ್ಕಿಂತಲೂ ನೀನಾದರೂ ಮಲಗಿ ನಿದ್ರೆಮಾಡುವುದೇ ಲೇಸು.'

## ಖೊಸಿಯಾಬ

ಹಾರೂನ್ ದೊರೆ ಮಿಶ್ರ (ಈಜಿಪ್ಟ್) ದೇಶವನ್ನು ಗೆದ್ದಾಗ ಹೇಳಿದ: 'ಈ ರಾಜ್ಯಕ್ಕೆ ತಾನು ಒಡೆಯ ಎಂಬ ಗರ್ವದಲ್ಲಿ ಆ ಪಾಪಿ ಫೇರೋ ತಾನೇ ದೇವರು ಎಂದಿದ್ದ. ಅವನಿಗೆ ಮತ್ತೆ ಈ ದೇಶವನ್ನು ಕೊಡುವುದಿಲ್ಲ. ನನ್ನ ಸೇವಕರಲ್ಲಿ ಅತಿ ಮಡೆಯನಾಗಿರುವವನು ಯಾವನೋ ಅವನಿಗೆ ಇದನ್ನು ವಹಿಸುತ್ತೇನೆ.' ಒಬ್ಬ ಕರೀ ಆಳು ಖೊಸಿಯಾಬ ಎಂಬುವವನಿದ್ದ, ಮುಠ್ಠಾಳ. ದೊರೆಯ ಕೋಪದ ಸಮಯದಲ್ಲಿ ಆ ಮುಟ್ಠಾಳನಿಗೆ ಆಯಿತು ಮಿಶ್ರದೇಶದ ರಾಜ್ಯ. ಅವನ ಬುದ್ಧಿಯೋ, ಅವನ ನ್ಯಾಯವೋ! ಒಂದು ದಿನ ರಾಜ್ಯದ ರೈತರು ಬಂದು ಹೇಳಿದರು: 'ನೀಲನದಿಯ ದಡದಲ್ಲಿ ಹತ್ತಿಯನ್ನು ಬಿತ್ತಿದ್ದೆವು. ಕಾಲವಲ್ಲದ ಕಾಲದಲ್ಲಿ ಮಳೆ ಬಂತು. ಬೆಳೆ ಕೊಚ್ಚಿಹೋಯಿತು. ಸ್ವಾಮಿ ನಮ್ಮನ್ನು ಸಲಹಬೇಕು.' ಹೇಳಿದ ಖೊಸಿಯಾಬ, 'ತುಪ್ಪಟ ಬಿತ್ತಿದರೆ ಕೊಚ್ಚಿಹೋಗುವುದಿಲ್ಲ' ಎಂದು. ಒಬ್ಬ ದರ್ವೀಷನಿಗೆ ಈ ಮಾತು ಕೇಳಿಸಿತು. ಹೇಳಿಕೊಂಡ

'ಐಶ್ವರ್ಯ ವಿದ್ಯೆಯನು ಅನುಸರಿಸಿ ಇರಲಾಗ
ಅದರ ಎಂಜಲು ಸಿಗದು ಬುದ್ಧಿಹೀನತೆಗೆಂದು.
ಮಾಯೆಯೊದಗಿಪುದಿಂದು ಮಡೆಯಂಗೆ ಭೋಗವನು
ಬಾಯೊಳಗೆ ಬೆರಳಿಡಲು ನೂರಾರು ಪಂಡಿತರು.
ಧನಕನಕ ಕಾರಣವು ವಿದ್ಯೆ ಬುದ್ಧಿಯು ಅಲ್ಲ,
ದೈವವೇ ಕಾರಣವು ಪದವಿಯೋಗಕ್ಕೆಲ್ಲ.
ಶಾಸ್ತ್ರ ಬಲ್ಲವನಾತ ನರಳುತ್ತಲಿರುತಿಹನು,
ಹೊನ್ನಿನಾ ರಾಶಿಯದು ಸೋಮಾರಿಗೆಲ್ಲೆಡೆಯು.
ಕಲಿಯದಗೆ ಬಹುಮಾನ, ಕಲಿತವಗೆ ದುಮ್ಮಾನ,
ಕಾಲ ಕಾಲಕ್ಕಿಂತು ನಡೆದಿಹುದು ಜಗದೊಳಗೆ.'

## ಉದ್ಯೋಗವಿಲ್ಲದ ಓದು

ಒಬ್ಬನನ್ನು ಕೇಳಿದರು, 'ಓದಿದವನು ಉದ್ಯೋಗವಿಲ್ಲದಿದ್ದರೆ ಏನನ್ನು ಹೋಲುವ'ನೆಂದು. ಹೇಳಿದ 'ಅವನೊಂದು ಮಧುವನ್ನೇ ಕೂಡಿಡದ ಜೇನು' ಎಂದು.

ಹೇಳು ಆ ಸವಿಯೆಂಬುದಿಲ್ಲದಿಹ ಕೀಟಕ್ಕೆ
ಮಧುವಿಲ್ಲ, ಕುಟುಕಲಾದರು ಬೇಡ ನೀನೆಂದು.

# ಕೀಷ್ ದ್ವೀಪದ ವ್ಯಾಪಾರಿ

ನನ್ನ ಗುರುತಿನವನು ಒಬ್ಬ ವ್ಯಾಪಾರಿ. ಒಂದು ನೂರೈವತ್ತು ಒಂಟೆಗಳ ನಲವತ್ತು ಆಳುಗಳ ಒಡೆಯನಾಗಿದ್ದ. ಪಾರಸಿಕ ಸಾಗರದಲ್ಲಿ ಕೀಷ್ ದ್ವೀಪ, ಅಲ್ಲಿ ಅವನ ಮನೆ. ಅಲ್ಲಿ ಒಮ್ಮೆ ನಾವಿಬ್ಬರೂ ಸೇರಿದೆವು. ಇಡೀ ರಾತ್ರಿ ಅವನು ಮಾತಾಡಿಯೆ ಆಡಿದ, 'ನನಗೆ ತುರ್ಕಿಸ್ತಾನದಲ್ಲಿ ಇಷ್ಟು ವಸ್ತುಸಂಗ್ರಹವಿದೆ. ಹಿಂದುಸ್ತಾನದೊಳಗಿಷ್ಟಿದೆ. ಇದು ಇಂತಹ ಹಿಡುವಳಿಯ ಆಧಾರಪತ್ರ. ಇದು ಇಂಥವನ ಹೊಣೆಪತ್ರ' ಎಂದು. ಮತ್ತೆ ಹೇಳಿದ: 'ಇಸ್ಕಂದರ್ಯದ (ಅಲೆಕ್ಸಾಂಡ್ರಿಯದ) ಹವ ಆರೋಗ್ಯವಾಗಿದೆ ಎನ್ನುವರು. ಅಲ್ಲಿಗೊಮ್ಮೆ ಹೋಗಿಬರಬೇಕು. ಅಯ್ಯೋ, ಆಗದಾಗದು. ಪಶ್ಚಿಮ ಸಾಗರ (ಮೆಡಿಟರೇನಿಯನ್) ಬಹಳ ಭೀಕರ ಎನ್ನುತ್ತಾರೆ. ಸಾದಿ, ಇನ್ನೊಂದು ಪ್ರವಾಸದ ಆಸೆ ಇದೆ. ಅದಾದರೆ ಕೇಳು, ವ್ಯಾಪಾರವನ್ನು ಬಿಟ್ಟು ಧ್ಯಾನದಲ್ಲಿ ಕಾಲ ಕಳೆಯಬೇಕೆಂದಿದ್ದೇನೆ.' 'ಯಾವ ಪ್ರವಾಸ ಅದು?' ಎಂದು ನಾನು ಕೌತುಕದಿಂದ ಕೇಳಿದೆ. ಅವನು ನುಡಿದ: 'ಪರ್ಷಿಯದ ಗಂಧಕ ಚೀಣ ದೇಶಕ್ಕೆ ತೆಗೆದುಕೊಂಡು ಹೋಗುತ್ತೇನೆ. ಅದಕ್ಕೆ ಅಲ್ಲಿ ಬಹಳ ಧಾರಣೆಯಂತೆ. ಚೀಣಾದ ಪಾತ್ರೆಗಳನ್ನು ರೂಮದೇಶದ ಕಡೆಗೆ ತೆಗೆದುಕೊಂಡು ಹೋಗುತ್ತೇನೆ. ರೂಮದ ಕಿಂಕಾಬು ಹಿಂದೂದೇಶಕ್ಕೆ ಒಯ್ಯುವುದು. ಹಿಂದುಸ್ತಾನದ ಉಕ್ಕು ಹಲಬ (ಅಲೆಪ್ಪೊ) ಪಟ್ಟಣಕ್ಕೆ ತೆಗೆದುಕೊಂಡುಹೋಗುವುದು. ಹಲಬದ ಗಾಜುಗಳನ್ನು ಯಾಮಾನಿಗೆ ಸಾಗಿಸುವುದು. ಯಾಮಾನಿನ ಪಟ್ಟಿಗಳನ್ನು ಪರ್ಷಿಯಕ್ಕೆ ತರುವುದು. ಆಮೇಲೆ ಈ ಸುತ್ತು ವ್ಯಾಪಾರ ಬಿಟ್ಟು ಊರಿನ ಅಂಗಡಿಯಲ್ಲಿ ನಿಲ್ಲುವುದು.' ಇಷ್ಟೆಲ್ಲ ಮಾತಾಡಿ ಸಾಕಾಗಿ ಕಡೆಗೆ ನನ್ನನ್ನು ಕೇಳಿದ, 'ಓ ಸಾದಿ, ನೀನಾದರೂ ಕಂಡು ಕೇಳಿದುದನ್ನು ಹೇಳು' ಎಂದು. ಹೇಳಿದೆ

**'ಕೇಳಿಲ್ಲವೇ ನೀನು ಗೋರ ಮರುಭೂಮಿಯಲಿ**
**ಒಂಟೆಯಾ ಮೇಲಿಂದ ಬಿದ್ದಾತ ಹೇಳಿದುದ.**
**ಲೋಕವನು ಕಟ್ಟಿಕೊಂಡಳುವವನ ಕಣ್ಣು ತುಂ**
**ಬುವುದೇನು? ತೃಪ್ತಿ; ಇಲ್ಲದೊಡೆ ಮಸಣದ ಧೂಳು.'**

# ಸಾದಿಯ ವಾದ—ಬಡವ ಶ್ರೀಮಂತರ ಮಾತು

ಒಬ್ಬ ದರ್ವೇಷನಂತೆ ಉಡುಪು ತೊಟ್ಟು ಏನೇನನ್ನೊ ಹೇಳುತ್ತ ಕುಳಿತಿದ್ದ. ಒಳಗೆ ಸಭ್ಯತನವಿರಲಿಲ್ಲವೆಂದು ತೋರಿತು. ಸುಮ್ಮನೇ ಹರಟುತ್ತಿದ್ದ. ಬಿರುನುಡಿಗಳನ್ನಾಡುತ್ತಾ ಧನಿಕರನ್ನು ದೂಷಿಸುತ್ತಾ ಇದ್ದ. 'ಬಡವರ ಕೈಕಟ್ಟಿಹೋಗಿದೆ, ಧನಿಕರಿಗೆ ಕಾಲೇ ನಡೆಯದು.

ಧಾರಾಳವಿದ್ದವರಿಗೆ ಹಣವೆಂಬುದಿನಿತಿಲ್ಲ,<br>ಧಾರಾಳಪಿನಿತಿಲ್ಲ ಧನಕನಕವುಳ್ಳರಿಗೆ'

ಎನ್ನುತ್ತಿದ್ದ. ನನ್ನನ್ನು ಕಾಪಾಡಿ ಮುಂದಕ್ಕೆ ತಂದವರು ಶ್ರೀಮಂತರು. ನನಗೆ ಅವನ ಮಾತು ನ್ಯಾಯವಾಗಿ ಕಾಣಲಿಲ್ಲ. ಹೇಳಿದೆ: 'ಅಣ್ಣ, ಧನಿಕರು ಎಂದರೆ ಬಡವರಿಗೆ ಭಂಡಾರ, ಸಾಧುಗಳಿಗೆ ಉಗ್ರಾಣ, ಯಾತ್ರಿಕರಿಗೆ ಗುರಿಕಂಡ ಗುಡಿ, ಪ್ರಯಾಣಿಕರಿಗೆ ಬೀಡಾರ, ನೆರೆಯವರಿಗೆ ಆಸರೆ. ಸೇವಕರು, ಸಂಗಡಿಗರು ಊಟಮಾಡಿದುದನ್ನು ಕೇಳಿ ನೋಡಿ ಆಮೇಲೆ ಅವರು ತಮ್ಮ ಭಾಗದ ಊಟಮಾಡುವರು. ಮನೆತಪ್ಪಿದವರಿಗೆ, ಕೈಲಾಗದವರಿಗೆ, ನೆರೆಹೊರೆಯ ಬಂಧುಬಳಗಕ್ಕೆ ಎಲ್ಲರಿಗೂ ಭಾಗ ಕೊಡುವರು.

ಧರ್ಮಗಳು ಸಂಸ್ಥೆಗಳು ಧನಿಕರಿಗೆ ತಾವುಂಟು,<br>ಹರಕೆಗಳು ಪೂಜೆಗಳು ದಾನಗಳು ಯಾಗಗಳು.<br>ನೂರು ಸಲ ತೊದಲುತ್ತ ಎರಡು ಮಂತ್ರವ ಹೇಳಿ,<br>ಇಷ್ಟೆಲ್ಲ ಸನ್ನಾಹ ಸೌಭಾಗ್ಯ ನಿನಗೆಲ್ಲಿ?

ಧರ್ಮಕರ್ಮದ ಕಾರ್ಯಗಳೆಲ್ಲ ಧನಿಕರಿಗೆ ಬಹು ಸುಲಭ. ಅವರ ವಸ್ತು ಒಡವೆಗಳೆಲ್ಲ ತೆರಿಗೆ ಕೊಟ್ಟು ಶುದ್ಧಿಹೊಂದಿರುವವು. ಅವರ ವಸ್ತ್ರವುಡುಗೆಗಳೂ ಶುದ್ಧವಾಗಿರುವವು. ಕೀರ್ತಿ, ಸಂತಸ ಎಲ್ಲ ಅವರಿಗೆ ಉಂಟು. ಕಣಜ ತುಂಬಿದ್ದರೆ ಈ ಕಡೆ ಭಕ್ತಿ ಹೊಮ್ಮಿ ಬೆಳೆಯುವುದು. ಶುದ್ಧವಾದ ವಸ್ತ್ರದಿಂದ ಪ್ರಾರ್ಥನೆಗೆ ಕಳೆಕಟ್ಟುವುದು. ಹಸಿದಹೊಟ್ಟೆಗೆ ಎಲ್ಲಿಬರಬೇಕು ಭಕ್ತಿ ಮುಕ್ತಿಯ ಆಲೋಚನೆ? ಬಡತನದ ಗೋಳಾಟಕ್ಕೆ ಧಾರಾಳವೆನ್ನುವುದು ಏನು ಗೊತ್ತು? ಬರಿ ಕಾಲಿಗೆ ಎಲ್ಲಿ ಪ್ರಯಾಣಮಾಡುವೆನೆಂಬ ಕಸುವು? ಬರಿ ಕೈಗೆ ಎಲ್ಲಿಯದು ಕೊಡುವೆನೆಂಬ ಮಾತು?

ಬೆಳಗಾಗ ಊಟಕ್ಕೆ ಏನೆಂಬ ಬಲು ಚಿಂತೆ,
ರಾತ್ರೆ ಸಂತಸದಿ ನಿದ್ರೆಯು ಮಾಡಗೊಡದಂತೆ.
ಸಂಗ್ರಹಿಸಿ ಕಾಳುಗಳನಿರುವೆ ಬೇಸಗೆಯಲ್ಲಿ
ಸಂತಸದೊಳಿರುತಿಹುದು ಬರಗಾಲ ಬಂದಲ್ಲಿ.

ದಾರಿದ್ರ್ಯಕ್ಕೂ ಶಾಂತಿಗೂ ಎಲ್ಲಿಯ ಕೂಡಿಕೆ? ತೃಪ್ತಿಯೆನ್ನುವುದು ಬೇರೆ. ಬಡತನ ಬೇರೆ. ಒಂದು ಕೈಮುಗಿದು ಪ್ರಾರ್ಥನೆಗೆ ಕುಳಿತಿರುವುದು, ಇನ್ನೊಂದು ಸಂಜೆಯೂಟಕ್ಕೇನು ಎಂದು ಚಿಂತಿಸುತ್ತಾ ಕುಳಿತಿರುವುದು. ಎರಡಕ್ಕೂ ಹೊಂದಿಕೆಯಾಗಬೇಕು ಹೇಗೆ?

ತುಂಬಿದಾ ಮನುಜನವ ದೇವನನು ಧ್ಯಾನಿಸುವ,
ಕೈ ಬರಿದು ಮನ ಬರಿದು ಬರುವುದೆಂತದು ಧ್ಯಾನ?

ಶ್ರೀಮಂತನಾದವನು ದೇವಾಲಯಕ್ಕೆ ಹೋದರೆ ಅಲ್ಲಿ ಅವನ ಭಕ್ತಿ ಒಪ್ಪುವುದು. ಅವನ ಮನಸ್ಸು ಚಲಿಸದಿರಲು ಅವಕಾಶ ಉಂಟು. ಜೀವನದ ಚಿಂತೆ ಬಾಧಿಸದಾಗಿ ಅವನು ಗ್ರಂಥವನ್ನು ಹಿಡಿದು ಅದರ ಅರ್ಥ ಗ್ರಹಿಸಲು ಸಾಧ್ಯವಾಗುವುದು.'

ಪ್ರತಿವಾದಿ ಹೇಳಿದ: 'ಪೈಗಂಬರನೆ ಸಾರಿ ಹೇಳಿದ್ದಾನೆ. ತಾನು ಬಡತನದಿಂದ ಶೋಭಿಸತಕ್ಕವನೆಂದು. ತಿಳಿದಿಲ್ಲವೇನಯ್ಯ?' ನಾನು ಹೇಳಿದೆ: 'ಸುಮ್ಮನಿರು. ಎರಡು ಲೋಕದ ಸ್ವಾಮಿ ತ್ಯಾಗಧೀರರ ಕುರಿತು, ದೇವರಿಗೆ ತಲೆತಗ್ಗಿಸಿದವರನ್ನು ಕುರಿತು ಆ ಮಾತು ಹೇಳಿದ. ಸಾಧುಗಳಂತೆ ಬಟ್ಟೆ ಹಾಕಿಕೊಂಡು ದಾನ ಬೇಡುವುದಕ್ಕೆ ಹೊರಟವರನ್ನು ಕುರಿತು ಆ ಮಾತು ಹೇಳಲಿಲ್ಲ.

ಎಲೆ ಭೇರಿ ಬರಿ ಶಬ್ದವಾಗಿರುವೆ, ಇದು ಯೇನು?
ಕಡೆಯ ದಿನದಲಿ ನೀನು ಒಪ್ಪಿಸುವುದೇನುಂಟು?
ಸುಮ್ಮನೇ ಸೆರೆಯುವರ ಬೇಡುವುದ ಬಿಟ್ಟುಬಿಡು.
ಜಪದ ಮಣಿಗಳನೆಣಿಸಿ ಏನೇನು ಫಲವಿಲ್ಲ.

ಬಡವ ಜ್ಞಾನವಿಲ್ಲದವನಾದರೆ ಅವನ ಬಡತನ ಬರಿ ನಾಸ್ತಿಕತೆಯೇ ಸರಿ. ಧನಕನಕ ನಮಗಿಲ್ಲದಿದ್ದರೆ ಬರಿಮೈಯಲ್ಲಿರುವವರಿಗೆ ವಸ್ತ್ರಗಳನ್ನು ನಾವೇನು ಹಂಚುವುದು? ನಾವೇ ಬೇಡುವರು ಎಂದಮೇಲೆ ಘನತೆಯನ್ನು ಸಾಧಿಸುವ ಹವ್ಯಾಸ ನಮಗೆಲ್ಲಿ? ಧನಿಕರ ತೋಳಿನ ಆ ಬಲಕ್ಕೆ ನಮ್ಮ ಈ ಬಡ ಕೈಯಿ ಏನು ಸಮ?

ಬಾಯಾರಿದವನೇನು ಕಾಣುವನು ಕನಸಿನಲಿ
ಸಕಲ ಲೋಕವು ಅವಗೆ ಒಂದು ನೀರಿನ ಚಿಲುಮೆ.'

ಹೀಗೆಲ್ಲ ಮಾತಾಡಿ ನಾನು ಇನ್ನೂ ಮುಗಿಸಿರಲಿಲ್ಲ. ಶಾಂತಿಯ ಕಡಿವಾಣವನ್ನು ಹಿಡಿದಿದ್ದ ಅವನ ಕೈ ಸಡಿಲಬಿತ್ತು. ಕೋಪದ ನುಡಿ ಎಂಬ ಅವನ ಕುದುರೆ ಹೆಮ್ಮೆಯೆಂಬ ಬಯಲುಹತ್ತಿ ಹುಚ್ಚಾಗಿ ಓಡಿತು. ನಾಲಗೆಯೆಂಬ ಕತ್ತಿಯನ್ನು ಒರೆಯಿಂದ ಸೆಳೆದು ನನ್ನೆದುರಿನಲ್ಲಿ ಝಳಪಿಸಿದ. ಹೇಳಿದ: 'ಧನಿಕರ ಗುಣಗಳನ್ನು ಇಷ್ಟು ಅದ್ಭುತವಾಗಿ ವರ್ಣಿಸಿರುವೆ. ನೀನು ಹೇಳಿದ್ದನ್ನು ನಂಬಿದರೆ ಅವರು ಬಡತನದ ವಿಷಕ್ಕೆಲ್ಲ ಔಷಧವಾಗಿದ್ದಾರೆ ಎನ್ನಬೇಕು. ದೈವದ ಉಗ್ರಾಣವನ್ನು ತೆಗೆಯುವುದಕ್ಕೆ ಅವರೇ ಬೀಗದ ಕೈಗಳು ಎನ್ನಬೇಕು. ನನಗೇನೋ ಅವರಲ್ಲಿ ದುಡುಕು, ಗರ್ವ, ಕೋಪ ಹೊರತಾಗಿ ಏನೂ ಕಾಣುವುದಿಲ್ಲ. ಒಡವೆ, ವಸ್ತು, ಎಂದರೆ ಬಾಯಿ ಬಾಯಿ ಬಿಡುತ್ತಾರೆ. ತಮ್ಮ ಎಲ್ಲ ಆಶೆಗಳನ್ನು ಪದವಿ, ಠೀವಿಗಳಿಗೆ ಧಾರೆಯೆರೆದಿದ್ದಾರೆ. ಮಾತನಾಡಿದರೆ ಸೊಕ್ಕು, ಕಣ್ಣೆತ್ತಿ ನೋಡಿದರೆ ತಾತ್ಸಾರ. ಶಾಸ್ತ್ರ ಬಲ್ಲವರನ್ನೆಲ್ಲ ಅವರು ಬಿಕ್ಷುಕರು ಎನ್ನುತ್ತಾರೆ. ಬಡವರೆಂದರೆ ಅವರಿಗೆ ಹೊಲೆಯರು. ಧನಕನಕ, ಅಧಿಕಾರ, ಎಲ್ಲ ತಮ್ಮದೇ ಸ್ವತ್ತು ಎಂದು ಅವರ ಭಾವನೆ. ಎಲ್ಲರಿಗಿಂತಲೂ ತಾವೇ ಮೇಲು ಎಂದು ಅವರ ಊಹೆ. ಹಣದಲ್ಲಿ ಮೇಲಾಗಿರಬಹುದು. ಸಭ್ಯತೆ ಶೂನ್ಯ. ಐಶ್ವರ್ಯ ಇರಬಹುದು, ಸತ್ಯ ಶೋಧಿಸಿದರೆ ಹಣವಿದ್ದೂ ಅವನು ಭಿಕ್ಷುಕನೆ ಎಂದು ಬುದ್ಧಿವಂತರಾಡಿದ ಮಾತು ಅವರ ಗಮನಕ್ಕೇ ಬರದು.

ಧನಮದದಿ, ಬಲ್ಲವನ ತುಚ್ಛವಾಗೆಣಿಸುವನ
ಕತ್ತೆಯೆಂಬುದು ಮೇಲು, ಗೋರೂಪವಿರಲೇನು ?'

ನಾನೆಂದೆ: 'ಹೀಗೆಲ್ಲ ಧನಿಕರನ್ನು ಬಯ್ಯದಿರು. ಅವರು ದಾನ ಧರ್ಮ ಮಾಡುವ ಒಡೆಯರು.' ಅವನು ಹೇಳಿದ: 'ನೀನು ಅವರನ್ನು ತಿಳಿದು ಅರಿಯೆ. ಅವರು ಹಣ ಕಾಸು ನಾಣ್ಯಗಳ ಗುಲಾಮರು. ಅವರು ಮಳೆಗಾಲದ ಮೇಘಗಳು ಎನ್ನುವೆಯ, ಆ ಮಳೆಯ ಒಂದು ಹನಿ ನಮಗೆ ಇಲ್ಲದಾದರೆ ಅದರಿಂದ ನಮಗೇನು ಫಲ? ಅವರಿಗೆ ಸೂರ್ಯನ ಪ್ರಕಾಶ

ಉಂಟೆ; ಅದರ ಒಂದು ಕಿರಣ ನಮಗಿಲ್ಲದಮೇಲೆ ಏನು ಪ್ರಕಾಶ ಇದ್ದೇನು? ಅವರು ಸಂಪತ್ತು ಸಾಹಸಗಳೆಂಬ ಕುದುರೆ ಏರಿದ್ದಾರೆಯೆ? ನಮ್ಮ ಬಳಿಗೆ ಅವರು ಬಂದದ್ದು ಇಲ್ಲ ಎಂದಮೇಲೆ ಯಾವ ಕುದುರೆ ಏರಿದ್ದರೇನು? ದೇವರ ಹಂಗಿಗೆ ಕೂಡ ಅವರು ಒಂದು ಹೆಜ್ಜೆ ಇಡರು. ಇತರರನ್ನು ಯಾವುದೋ ಹಂಗಿಗೆ ಹಾಕಿಕೊಳ್ಳಬೇಕು, ಹಾಗಲ್ಲದಿದ್ದರೆ ಅವರು ಒಂದು ಎಳ್ಳುಕಾಳು ದಾನಮಾಡರು. ಧನವನ್ನು ಸುಮ್ಮನೇ ನೋಡುತ್ತ ಕಾರ್ಪಣ್ಯ ಜೀವನ ನಡೆಸುವುದು ಅವರ ಸ್ವಭಾವ. ಹೋಗುವಾಗ ಅಳುತ್ತಳುತ್ತ ಬಿಟ್ಟುಹೋಗುವುದು. ಜಿಪುಣ ಗಳಿಸಿದ ಧನ ಮಣ್ಣಿನಿಂದ ಎದ್ದಿತು ಯಾವಾಗ, ಜಿಪುಣ ತಾನೇ ಮಣ್ಣುಹೊಕ್ಕಾಗ, ಎಂದು ಹಿರಿಯರು ಚೆನ್ನಾಗಿ ಹೇಳಿದರು.

> ಕೂಡಿಡುವನೊಬ್ಬಾತ ಕಷ್ಟಗಳ ಗಳಿಸುತ್ತ
> ಕಷ್ಟವಿನಿತಿಲ್ಲದೆಲೆ ವೆಚ್ಚಗೈವನು ಒಬ್ಬ.'

ನಾನು ಹೇಳಿದೆ: 'ಸಿರಿವಂತರ ಮಿತವ್ಯಯವನ್ನು ನಿನ್ನ ಆ ಬಿಕ್ಷುಕನ ಕಣ್ಣಿನಿಂದ ನೋಡಿರುವೆ. ಧಾರಾಳಿ, ಜಿಪುಣ ಎನ್ನುವುದನ್ನು ಆತುರವನ್ನು ಬಿಟ್ಟು ನೋಡಿ ತಿಳಿಯಬೇಕು. ಒರೆಗಲ್ಲು ಚಿನ್ನ ಯಾವುದು ಎಂದು ಹೇಳುತ್ತದಂತೆ. ಹಾಗೆ, ಲೋಭಿಯನ್ನು ತೋರಿಸುವುದಕ್ಕೆ ಬಿಕ್ಷುಕನಾಗ ಬೇಕೇನೊ!' ಆ ಗೆಳೆಯ ಹೇಳಿದ: 'ನನ್ನ ಅನುಭವ ಹೇಳುತ್ತೇನೆ. ಬಾಗಿಲಲ್ಲಿ ಸೇವಕರನ್ನು ನಿಲ್ಲಿಸಿಬಿಡುತ್ತಾರೆ ಆ ಧನಿಕರು. ಅವರಿಗೆ ಆ ಸಿಟ್ಟಿನ ಆಳುಗಳು ಹೆಬ್ಬಾಗಿಲಿನಲ್ಲೆ ನಿಂತಿರಬೇಕು. ಸಾಧುಗಳನ್ನು ತಡೆಯಬೇಕು. ನಂತರ ಕುತ್ತಿಗೆಗೆ ಕೈಹಾಕಿ ತಳ್ಳಬೇಕು. ಸೇವಕರು ಹೇಳಿಯೇ ಹೇಳುತ್ತಾರೆ ಮನೆಯಲ್ಲಿ ಯಾರೂ ಇಲ್ಲ, ಮನೆಯಲ್ಲಿ ಯಾರೂ ಇಲ್ಲ ಎಂದು. ಸತ್ಯ.

> ನ್ಯಾಯಮತಿ ತಿಳಿವೊಂದು ಯಜಮಾನಗಿಲ್ಲದಿರೆ
> ಆಳು ಹೇಳಿದ ನಿಜವ ಮನೆಯೊಳಗೆ ಆರಿಲ್ಲ.'

ಅದಕ್ಕೆ ನಾನು ಹೇಳಿದೆ: 'ಆ ನಡತೆಯೇ ಸರಿ. ಬೇಡುವವರು ಸುಮ್ಮನೆ ಮುತ್ತುತ್ತಾರೆ. ಪ್ರಾಣ ಹಿಂಡುತ್ತಾರೆ. ಮರಳುಕಾಡಿನ ಎಲ್ಲ ಮರಳಕಣಗಳು ಮುತ್ತುಗಳಾದರೂ ಕೇಳುವವರ ಆಶೆಗೆ ಕೊನೆಯಿಲ್ಲ.

ತುಂಬಲಾರದು ಹಣವು ಆಶೆತುಂಬಿದ ಕಣ್ಣ,
ನೀರು ಬಾವಿಗೆ ಬರದು ರಾತ್ರೆ ಮಂಜದು ಬಂದು.

ಹಾತಿಮನೆ ಮರಳುಕಾಡನ್ನು ಬಿಟ್ಟು ಪಟ್ಟಣಕ್ಕೆ ಬಂದಿದ್ದನೆನ್ನು; ಬಿಕ್ಷುಕರೆಲ್ಲ ಸೇರಿ ಅವನ ಬೆನ್ನಿನಮೇಲಿನ ವಸ್ತ್ರ ಹರಿದುಹಾಕಿಬಿಡುತ್ತಿದ್ದರೋ ಹೇಗೊ?

ನೋಡದಿರು ನೀನೆನ್ನ, ದೃಷ್ಟಿ ತಾಕುವುದೆನಗೆ
ಬಿಕ್ಷುಕರ ಕೈತಾಕಿ ಒಳ್ಳಿತಾಗದು ಒಂದು.'

'ಏನು ಬಾಳೋ ಅವರದು, ಮರುಗಬೇಕು ಅದಕ್ಕೆ' ಎಂದ ಆ ಮನುಷ್ಯ. 'ಅಲ್ಲಲ್ಲ, ಅವರ ಸಿರಿಯನ್ನು ಕಂಡು ಕಿಚ್ಚಿನಿಂದ ಕುದಿಯುತ್ತಿರುವೆ' ಎಂದೆ ನಾನು. ಹೀಗೇ ಜಗಳ ನಡೆದಿತ್ತು. ಆ ಚದುರಂಗದಾಟದಲ್ಲಿ ಅವನು ಏನೇನು ಪೇದೆಗಳನ್ನು ಒಡ್ಡಿದ, ಅವಕ್ಕೆಲ್ಲ ನನ್ನ ಕಡೆಯ ಪೇದೆಗಳನ್ನು ಅಡ್ಡಲಾಗಿ ಇಡುತ್ತಿದ್ದೆ. ನನ್ನ ದೊರೆಯನ್ನು ಅವನು ಹಿಡಿದು ನಿಲ್ಲಿಸಿದನೆಂದರೆ ರಾಣಿಯಿಂದ ಆ ಸೆರೆ ಬಿಡಿಸುತ್ತ ಇದ್ದೆ. ಅವನ ಮಾತಿನ ನಾಣ್ಯ ಎಲ್ಲ ಮುಗಿಯುತ್ತ ಬಂದಿತು. ತರ್ಕದ ಅಂಬುಗಳು ಎಲ್ಲ ಹೂಡಿ ಆಗಿಹೋದವು.

ಮಾತಿನಾ ಮಲ್ಲನಿಗೆ ಹೆದರಿ ಹಿಂದಾಗದಿರು.
ಉತ್ಪ್ರೇಕ್ಷೆ ಹೊರತಾಗಿ ಅವನಿಗೇನುಳಿದಿಲ್ಲ.
ಶಾಸ್ತ್ರಗಳು, ನ್ಯಾಯಕಟ್ಟಳೆಯೆಂಬ ಮಾತುಗಳು
ನಿನ್ನ ಕಡೆಗಿರುತಿರಲು ನಿಲ್ಲಿಸವುಗಳ ಮುಂದೆ.
ಶಸ್ತ್ರಗಳು ಇಹವೆಂದು ಹೊರಗೆ ತೋರುವನವನು.
ಅವನ ಕೋಟೆಯ ಒಳಗೆ ಸೈನಿಕರು ತಾವಿಲ್ಲ.

ಕಡೆಗವನ ತರ್ಕ ಯುಕ್ತಿಗಳು ಮುಗಿದುಹೋದವು. ಸೋಲನ್ನು ಒಪ್ಪುವ ಸಮಯ ಬಂದಿತು. ಒರಟುತನದ ಕೂಗು ಮೊದಲುಮಾಡಿದ. ತನ್ನ ಮಗನಾದ ಅಬ್ರಾಮನೊಡನೆ ತರ್ಕಮಾಡಿ ಸೋತು ಆಸುರನು ಮುಷ್ಟಿಯುದ್ಧವನ್ನು ಪ್ರಾರಂಭಿಸಿದ ಹಾಗೆ ಆಯಿತು. ಅವನು ನನ್ನನ್ನು ಬಯ್ದ; ನಾನು ಅವನನ್ನು ಬಯ್ದೆ. ಅವನು ನನ್ನ ಕುತ್ತಿಗೆಗೆ ಎರಗಿದ; ನಾನು ಅವನ ಗಡ್ಡಕ್ಕೆ ಹಾರಿದೆ.

ಮೇಲೆ ಬಿದ್ದನು ಅವನು, ಮೇಲೆ ಬಿದ್ದೆನು ನಾನು.
ಸುತ್ತು ಮುತ್ತಿದ ಮಂದಿ ಆಟವನು ನೋಡಿದರು.

ಏನು ಕಾರಣವೆಂದು ಕೇಳಿ ತಿಳಿದರು ಅವರು.
ಏನದಚ್ಚರಿಯಾಯ್ತೊ ತಿಳಿದು ನಕ್ಕರು ಅವರು.

ಕಡೆಗೆ ನಮ್ಮ ಮಾತನ್ನು ಕಾಜಿಯ ಹತ್ತಿರ ಒಯ್ದೆವು. ಆತನ ನ್ಯಾಯದಂತೆ ನಡೆಯುವುದೆಂದು ಮನಸ್ಸುಮಾಡಿದೆವು ನ್ಯಾಯಾಧಿಪತಿ ಬಡವ ಬಲ್ಲಿದರ ಭೇದವನ್ನು ಸರಿಯಾಗಿ ತಿಳಿಸಿ ಜಗಳ ಪರಿಹರಿಸುವನೆಂದು ನಂಬಿದೆವು. ಕಾಜಿ ನಮ್ಮನ್ನು ದೃಷ್ಟಿಸಿನೋಡಿ, ನಮ್ಮ ಎಲ್ಲ ಹೇಳಿಕೆಗಳನ್ನು ಕೇಳಿ, ಬಹಳವಾಗಿ ಆಲೋಚನೆಮಾಡಿ ತಾನು ಹೇಳತೊಡಗಿದ: 'ಧನಿಕರನ್ನು ಬಹಳವಾಗಿ ಹೊಗಳಿ, ಬಡವರನ್ನು ತೆಗಳಿರುವ ಎಲೆ ಅಣ್ಣ, ಹೂವರಳಿರುವ ಕಡೆ ಮುಳ್ಳು ಉಂಟು, ಮಧುಪಾನ ಇದ್ದ ಕಡೆ ಸಂಕಟ ಉಂಟು. ಕೂಡಿಟ್ಟ ಹಣಕ್ಕೆ ಸರ್ಪದ ಕಾವಲುಂಟು, ಮುತ್ತು ಇರುವ ಕಡೆ ಮೀನಿನ ಭಯ. ಲೋಕದ ಸವಿಯೆಂಬ ಜೇನು ಮುಂದೆ ಕಂಡಷ್ಟು ಹಿಂದೆ ಸಾವಿನ ಕುಟುಕು. ಸ್ವರ್ಗ ಸುಖಕ್ಕೂ ನಮಗೂ ನಡುವೆ ಕಾದುಕೊಂಡಿದೆ ಷೈತಾನ.

ಮಾಯಗಾತಿಯು ಗೆಳೆಯನನು ಕೊಲ್ಲದಿರುವನಕ
ಸ್ಪರ್ಧಿಗಳು ಕುದಿದರೇನಾತನಿಗೆ ಭಯವಿಲ್ಲ.
ಹೂವುಗಳು, ಮುಳ್ಳುಗಳು, ಹಣ, ಸರ್ಪ, ಸುಖ, ದುಃಖ
ಎಲ್ಲವೂ ಒಂದಾಗಿ ಕಂಗೊಳಿಸುತಿರುತಿಹವು.

ತೋಟವೆಂದ ಕಡೆ ಪರಿಮಳವ ಬೀರುವ ಗಿಡವೂ ಉಂಟು, ಒಣಗಿದ ಮರವೂ ಉಂಟು. ಹಾಗೆಯೇ ಧನಿಕರಲ್ಲಿ ಒಳ್ಳೆಯವರೂ ಇದ್ದಾರೆ, ಕೆಟ್ಟವರೂ ಇದ್ದಾರೆ. ಬಡವರಲ್ಲೂ ಹಾಗೇ ತೃಪ್ತಿಯಿಂದಿರುವವರೂ ಇದ್ದಾರೆ, ಶಾಂತಿಯಿಲ್ಲದವರೂ ಇದ್ದಾರೆ.

ಮಂಜಿನಾ ಹನಿಯೆಲ್ಲ ಒಂದೊಂದು ಮುತ್ತಾಗೆ
ಮುತ್ತಿಗಾದರು ಆಗ ಕಲ್ಲುಮಣ್ಣಿನ ಬೆಲೆಯು.

ನಮ್ಮ ಪ್ರಭುವಿನ ಹತ್ತಿರ ಧನಿಕರಾದವರಿದ್ದಾರೆ, ಬಡತನದ ಸಭ್ಯತೆ ಯಥೇಚ್ಛವಾಗಿ ಉಳ್ಳವರು; ಬಡವರೂ ಇದ್ದಾರೆ ಸಿರಿವಂತರಂತೆ ಗಾಂಭೀರ್ಯ ತಳೆದವರು. ಧನಿಕರಲ್ಲಿ ಅಗ್ರಗಣ್ಯನಾದವನು ಯಾರು? ಬಡವರ ದುಃಖಗಳನ್ನು ಕೇಳುವವನು. ಪುಣ್ಯವಂತನಾದ ಬಡವನು ಯಾರು? ಸಿರಿವಂತರ ಭೋಗವನ್ನು ಕಂಡು ಗೋಳಾಡದೆ ಇರುವವನು.'

ನನಗೆ ಹೀಗೆ ಹೇಳಿ ಕಾಜಿ ನನ್ನ ಪ್ರತಿವಾದಿಯ ಕಡೆಗೆ ತಿರುಗಿ ಹೇಳಿದ: "ಸಿರಿವಂತರಾದವರೆಲ್ಲ ಪಾಪಿಗಳು ಎಂದಿರುವ ಎಲೆ ಅಣ್ಣ, ಅವರು ತ್ಯಜಿಸಬೇಕಾದುದನ್ನು ಸೇವಿಸುತ್ತ ಮತ್ತರಾಗಿರುವರೆಂದು ಹೇಳಿದೆ. ಅಂಥವರೂ ಇದ್ದಾರೆ, ಜಿಪುಣತನದಲ್ಲಿ ಗಟ್ಟಿಗರಾದವರು. ಸುಮ್ಮನೇ ಹಣ ಹೂಳಿಡುವುದು, ತಾವೂ ತಿನ್ನದೆಹೋಗುವುದು, ಇತರರಿಗೂ ಕೊಡದಿರುವುದು. ಕ್ಷಾಮ ಆವರಿಸಿದರೇನು, ನೆರೆ ಬಂದು ಲೋಕ ಕೊಚ್ಚಿಹೋದರೆ ಏನು, ತಾವು ರಕ್ಷಣೆಯುಳ್ಳವರೆಂದು ಹಲವರು ಬಡವರನ್ನು ವಿಚಾರಿಸರು. ದೇವನು ತಮ್ಮ ಮೇಲೆ ಕೋಪ ಮಾಡಬಹುದು ಎಂಬುದನ್ನು ಅರಿಯದೆ ಹೇಳಿಕೊಳ್ಳುವರು :

'ಆಸರೆಯ ಕಾಣದೆಲೆ ಅಳಿಸರಳಿಯಲಿಯೇನು,
ಬೇಕಾದುದೆಲ್ಲವೂ ಇರುತಿಹುದು ಎಮಗೀಗ.
ಪ್ರಳಯವಾಗುತ ನೀರು ಹರಿದು ತುಂಬಿರಲೇನು,
ಈಜುತಿಹ ಬಾತಿಗೇನಾದರೂ ಭಯವುಂಟೆ?'
ತುಚ್ಛನಾ ಮಾತಿಷ್ಟು ತಾನು ಉಳಿದರೆ ಆಯ್ತು
ಮಿಕ್ಕಲೋಕವುಯೆಲ್ಲ ಸತ್ತರವಗೇನಾಯ್ತು?

ನೀನು ವರ್ಣಿಸಿದಂಥ ಸಿರಿವಂತರೂ ಇದ್ದಾರೆ. ಇಲ್ಲವೆನ್ನುವುದಕ್ಕಾಗದು. ಆದರೆ ನೋಡು, ಇನ್ನೊಂದು ಪಂಗಡದ ಜನರೂ ಇದ್ದಾರೆ. ಅವರ ಪಂಕ್ತಿಯಲ್ಲಿ ಎಲ್ಲ ಸಭ್ಯರಿಗೂ ಧಾರಾಳವಾದ ಊಟ ಉಂಟು. ದಾನಕ್ಕೆಂದು ಹರಕೆ ಹೊತ್ತವರು ಅವರು. ಎಲ್ಲೆಲ್ಲಿ ಕೇಳಬೇಕೊ ಅಲ್ಲೆಲ್ಲ ಅವರು ಕ್ಷಮೆ ಬೇಡುವರು; ಎಲ್ಲೆಲ್ಲಿ ನಮ್ರತೆ ತೋರಬೇಕೊ ಅಲ್ಲೆಲ್ಲ ತೋರುವರು. ಹೀಗೆ ಸಾಧಿಸುತ್ತ ಇರುವರು ಇಹಪರಗಳೆರಡನ್ನು. ದೇಶದೇಶದ ಒಡೆಯ, ಧರ್ಮದ ನ್ಯಾಯದ ಮುಂದಾಳು, ಜಯಶಾಲಿ, ಸುಲೇಮಾನನಿಂದಲೆ ಇಳಿದುಬಂದ ಗದ್ದುಗೆಯಲ್ಲಿ ಇರುವವನು ಆದ ಮುಸಫ್ಫರುದ್ದೀನ್ ಅತಾಬಕ್ ಅಬೂಬಕರ್‌ಸಾದ್— ಅವನಿಗೆ ದೇವರು ಜಯ ಕೊಡಲಿ, ಆಯುಸ್ಸು ಕೊಡಲಿ, ಶಾಂತಿ ಕೊಡಲಿ!— ಅಂತಹ ಅರಸನ ಅಚ್ಚುಕಟ್ಟಿಗೆ ತಕ್ಕ ಪ್ರಜೆಗಳೆನ್ನಿಸಿಕೊಂಡಿರುವರು.

— ಆದಮನ ಕುಲಕೆಲ್ಲ ನೀನು ತೋರುವ ಪ್ರೇಮ
ತಂದೆ ಮಗನಿಗೆ ತೋರನೆನಲು ಬಾಧಕವೇನು?

ಮನುಜನಿಗೆ ಹಿರಿಯು ಕರುಣೆಯ ತೋರೆ ಆ ದೇವ
ನಿನ್ನನಿರಿಸಿದನೆಮ್ಮ ಈ ಜಗಕೆ ದೊರೆಯಾಗಿ!—"

ಹೀಗೆ ಓಡುತ್ತಿತ್ತು ಕಾಜಿಯ ವಾಗ್ಝರಿ. ಅವನ ನುಡಿಯಿಂ
ಆ ಕುನುರೆ ನಮ್ಮ ಊಹೆಗೆ ಮೀರಿ ವೇಗ ತಾಳಿ ಹಾರುತ್ತಿತ್ತು. ತ
ತಗ್ಗಿಸಿ ಅವನ ತೀರ್ಮಾನಕ್ಕೆ ಒಪ್ಪಿದೆವು. ಜಗಳ ಮಾಡಿದ ತಪ್ಪಿ
ಕ್ಷಮೆ ಬೇಡಿದೆವು. ಶಾಂತಿ ಸಂಧಾನಕ್ಕೆ ತಿರುಗಿದೆವು. ಒಬ್ಬರೊಬ್ಬ
ಸಿರವನ್ನು ಒಬ್ಬರೊಬ್ಬರ ಪಾದದಲ್ಲಿಟ್ಟು, ಒಬ್ಬರೊಬ್ಬರನಪ್ಪಿ, ತುಂಟತ
ಬೇಡವೆಂದು ನಿರ್ಧರಿಸಿ ಯುದ್ಧ ಪ್ರಕರಣವನ್ನು ಶಾಂತಿಗೆ ತಿರುಗಿ
ಬಿಟ್ಟೆವು. ಈ ಎರಡು ನುಡಿಗಳ ಮಂಗಳ ಹಾಡಿ ಮುಗಿಸಿದೆವು.

ಎಲೆ ಬಡವ, ಸುಖದುಃಖ ತಿರುಗಣೆಗೆ ಮರುಗದಿರು,
ಸತ್ತರೂ ಕತ್ತಲೆಗೆ ಒಯ್ಯುವುದು ಈ ಗೋಳು.
ಎಲೆ ಧನಿಕ, ಕೊಡುಗೈಯ ತೋರಯ್ಯ ಇರುವಂದು
ಇಹಪರಗಳೆರಡರಲಿ ಸುಖವುಂಟು ಇದರಿಂದ.

91—45. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು